ಅಗಸ್ಟ್ 2018

Wildlife Conservation Group

# ಲೇಖನಗಳು




**ವಿನ್ಯಾಸ**
ಅಶ್ವಥ .ಕೆ .ಎನ್

**ಮುಖಪುಟ ಛಾಯಾಚಿತ್ರ**
ಪೃಥ್ವಿ .ಬಿ ಮೈಸೂರು

**ಪರಿಷ್ಕರಣೆ**
ಮುರಳಿ .ಎಸ್
ಅನನ್ಯರೂಪ

**ಕರಡು ತಿದ್ದುಪಡಿ**
ಡಾ.ದೀಪಕ್ .ಬಿ, ಮೈಸೂರು




# ಗೌರಿ ಹೂ

**ಸಾಮಾನ್ಯ ಹೆಸರು: Flame Lily**

**ವೈಜ್ಞಾನಿಕ ಹೆಸರು: *Gloriosa superba***



© ಡಬ್ಲ್ಯೂ ಸಿ ಜಿ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಗೌರಿ ಹೂ ಆಫ್ರಿಕಾದಲ್ಲಿ ಮತ್ತು ವಿಶ್ವದ ಪೂರ್ವ ದೇಶಗಳ ಆಗ್ನೇಯ ಭಾಗಗಳಲ್ಲಿ ಬೆಳೆಯುವ ಒಂದು ಸುಂದರವಾದ ಬಳ್ಳಿ. ಈ ಪುಷ್ಪವು ಜಿಂಬಾಬ್ವೆ ದೇಶದ ರಾಷ್ಟ್ರೀಯ ಹೂವು ಕೂಡ. ಇದನ್ನು ಇಂಗ್ಲೀಷ್ ನಲ್ಲಿ Flame Lily, ವೈಜ್ಞಾನಿಕವಾಗಿ Gloriosa Superba ಎಂದು ಕರೆಯುವರು. ಹೆಸರೇ ಹೇಳುವಂತೆ ಈ ಹೂವು ಗ್ಲೋರಿಯಸ್ಸಾಗಿ ಮತ್ತೆ ಸೂಪರಾಗಿ ಅಂದರೆ ಅದ್ಭುತವಾಗಿ ಇದೆ. ಈ ಗಿಡ ಗೌರಿ ಮಾಸದಲ್ಲಿ ಹೂಬಿಡುವುದರಿಂದ ಇದಕ್ಕೆ ಗೌರಿ ಹೂವು ಎಂದು ಕನ್ನಡದಲ್ಲಿ ಕರೆಯುವರು. ಇದರ ಹೂಗಳು ಸುಂದರವಾದ ಹಳದಿಯ ಅಂಚುಗಳಿಂದ ಕೂಡಿದ ಕೆಂಪು ಮತ್ತು ಹಳದಿ ಬಣ್ಣದ ಅಥವಾ ನೇರಳೆ ಬಣ್ಣದ ಹೂಗಳಾಗಿದ್ದು, ಅವು ಜುಲೈನಿಂದ ಅಕ್ಟೋಬರ್ ತಿಂಗಳಿನಲ್ಲಿ ಮೂಡುತ್ತವೆ. ಗೌರಿಗಿಡ ತಿಳಿಹಸಿರು ಬಣ್ಣದ ಎಲೆಗಳನ್ನು ಹೊಂದಿದ್ದು ನಾಲ್ಕು ಮೀಟರ್ ಉದ್ದ ಬೆಳೆಯುತ್ತದೆ, ಕಾಂಡವೂ ಕೂಡ ಹಸಿರು ಬಣ್ಣವನ್ನು ಹೊಂದಿರುತ್ತದೆ. ಗೌರಿಗಿಡವು ಅತ್ಯುನ್ನತ ಔಷಧೀಯ ಸಸ್ಯವಾಗಿದ್ದು ಹಸಿ ಗಾಯಗಳು, ಹುಣ್ಣುಗಳು, ಚೇಳು ಮತ್ತು ಹಾವು ಕಡಿತ, ಸಂಧಿವಾತ, ಕಾಲರಾ, ಮೂತ್ರಪಿಂಡದ ಸಮಸ್ಯೆ, ತುರಿಕೆ, ಕುಷ್ಠರೋಗ, ಮೂಲವ್ಯಾಧಿ, ಕ್ಯಾನ್ಸರ್, ದುರ್ಬಲತೆ, ಸಿಡುಬು ಮತ್ತು ಲೈಂಗಿಕವಾಗಿ ಹರಡುವ ರೋಗಗಳಿಗೆ ಔಷಧಿಯಾಗಿ ಕೆಲಸ ಮಾಡುತ್ತದೆ.



# ಅಪರೂಪದ ಕುರುಡುಗಪ್ಪಟ ಹಕ್ಕಿಯೊಂದಿಗೆ

ಚುಮು ಚುಮು ಚಳಿಗಾಲದ ಮುಂಜಾನೆ ಇನ್ನೂ ಭಾಸ್ಕರ ಉದಯಿಸಿರಲಿಲ್ಲ. ನಾನು, ಚಂದ್ರು ಶಿಡೇನೂರು ಸೇರಿ ಬೈಕೇರಿ ಕಾಕೋಳ ಸನಿಹದ ರಾಣೆಬೆನ್ನೂರಿನ ಕೃಷ್ಣಮೃಗ ಅಭಯಾರಣ್ಯದ ಕುರುಚಲು ಕಾಡಿನತ್ತ ಪ್ರಯಾಣಿಸ ತೊಡಗಿದೆವು. ಇಬ್ಬನಿ ಬಿದ್ದು ಜಗವೆಲ್ಲ ಇನ್ನೂ ನಿದ್ದೆಯಲ್ಲೇ ಇದ್ದಂತ್ತಿತ್ತು. ನಮ್ಮ ಮೈ-ಮನವೆಲ್ಲ ಚಳಿಗೆ ನಡುಗುತ್ತಿತ್ತು. ನಾವು ಕಾಡಂಚಿಗಿರುವ ಬದುವಿನ ಹತ್ತಿರ ಬೈಕನ್ನು ನಿಲ್ಲಿಸಿ, ಮಂಜು ಕವಿದ ಅಡವಿಯಲ್ಲಿ ಹೆಜ್ಜೆ ಹಾಕುತ್ತಾ ಸಾಗತೊಡಗಿದೆವು. ಅತ್ತ ಪೂರ್ವದ ಅಂಬರದಲ್ಲಿ ನಿಧಾನವಾಗಿ ಭಾಸ್ಕರ ತನ್ನ ಕೆಂಪು ಛಾಯೆಯಲ್ಲಿ ಉದಯಿಸತೊಡಗಿದ. ಸಮಯ ಕಳೆದಂತೆ ಸೂರ್ಯ ಮೇಲೆ ಬಂದಂತೆ ಇಬ್ಬನಿ ಕರಗಿ ಪ್ರಕೃತಿ ನಿಚ್ಚಳವಾಯಿತು. ನಾವು ಚೆಗರಿಮಟ್ಟಿಯತ್ತ ಕ್ಯಾಮೆರಾವನ್ನು ಹಿಡಿದು ನಿಧಾನವಾಗಿ ಕಾಲ್ನಡಿಗೆಯಲ್ಲಿ ಹೋಗುತ್ತಿರುವಾಗ ಸ್ವಲ್ಪದ ದೂರದಲ್ಲಿ ಭೂತಾಯಿಯ ಒಡಲಾಳಕ್ಕೆ ಹತ್ತಿಕೊಂಡಿರುವ ಕಪ್ಪಾದ ಕಲ್ಲು ಬಂಡೆಯ ಮೇಲೆ ಬೂದು ವರ್ಣದ ಯಾವುದೋ ವಸ್ತುವೊಂದು ಅಲುಗಾಡಿದಂತೆ ಭಾಸವಾಯಿತು. ನಾನು ಚಂದ್ರು ಒಬ್ಬರಿಗೊಬ್ಬರು ಕೈಸನ್ನೆ ಮಾಡಿಕೊಂಡು ಮೌನಿಗಳಾಗಿ ನಿಧಾನವಾಗಿ ಅದರತ್ತ ಹೆಜ್ಜೆ ಹಾಕಿದೆವು.



ಟೆಲಿಫೋಟೊ ಲೆನ್ಸ್ ಮೂಲಕ ನೋಡಿ ಅಲ್ಲಿ ಜೀವಿ ಇರುವುದನ್ನು ನಾನು ಖಾತ್ರಿ ಮಾಡಿಕೊಂಡೆ. ಹೌದು ಅಲ್ಲಿರುವುದು ಅಪರೂಪವಾಗಿ ಕಾಣಸಿಗುವ ಕುರುಡುಗಪ್ಪಟ (ನೈಟ್ ಝಾರ್) ಹಕ್ಕಿಯಾಗಿತ್ತು. ನಾನು ನಿಧಾನವಾಗಿ ನೆಲದ ಮೇಲೆ ಕುಳಿತು ತೆವಳುತ್ತಾ ಸಾಗಿ, ಹೊಟ್ಟೆಯನ್ನು ನೆಲಕ್ಕೆ ಹಚ್ಚಿ ಮಲಗಿ, ಎರಡು ಕೈಗಳನ್ನು ಹರಳುಗಳಿರುವ ನೆಲಕ್ಕೆ ಹಚ್ಚಿ ಆ ಹಕ್ಕಿಯ ಫೋಟೊಗ್ರಫಿ ಮಾಡತೊಡಗಿದೆ. ಹಕ್ಕಿ ರಾತ್ರಿ ಎಚ್ಚರವಿದ್ದುದ್ದರಿಂದ ನಿದ್ರೆಯ ಮೂಡಿನಲ್ಲಿತ್ತು. ಒಂದು ಬಾರಿ ಕಣ್ಣು ತೆರೆದು ನಮ್ಮನ್ನೊಮ್ಮೆ ನೋಡಿ ನಿಧಾನವಾಗಿ ಕಣ್ಣು ಮುಚ್ಚತೊಡಗಿತು. ಈಗ ನಾನು ಎಚ್ಚೆತ್ತು ಕೊಂಚ ಮುಂದೆ ಸಾಗಿದೆ. ತಕ್ಷಣವೇ ಎಚ್ಚೆತ್ತ ಆ ನತ್ತಿಂಗ ಹಕ್ಕಿ ಗಾಬರಿಯಿಂದ ಹಾರಿ ಸ್ವಲ್ಪ

ದೂರದಲ್ಲಿ ಮತ್ತೆ ನೆಲದ ಮೇಲೆ ಕುಳಿತು ತೂಗಡಿಸ ತೊಡಗಿದಾಗ ನಾನು ನೆಲಕ್ಕೆ ಹೊಟ್ಟೆ ಹಚ್ಚಿ ಮುಂದೆ ಸಾಗಿ ಅದರ ಫೋಟೋಗ್ರಫಿ ಮಾಡಿದೆ. ನೆಲದಲ್ಲಿ ಮಲಗಿ ಆ ಹಕ್ಕಿಯ ಚಟುವಟಿಕೆಗಳನ್ನು ವೀಕ್ಷಿಸುತ್ತಿದ್ದ ಚಂದ್ರು ಅವರಿಗೆ ಪಕ್ಷಿ ಕಾಳಜಿ ತೋರಿಸುತ್ತಾ ಪದೇಪದೇ ತಾನಿದ್ದ ಸ್ಥಳವನ್ನು ಬದಲಾಯಿಸುತ್ತಿತ್ತು.



ನಾನು ಛಲ ಬಿಡದ ತ್ರಿವಿಕ್ರಮನಂತೆ ಅದನ್ನು ಬೆಂಬತ್ತಿ ಛಾಯಾಗ್ರಹಣ ಮಾಡಿದೆ. ನೈಟ್ ಝಾರ್ ಕಣ್ಣು ಮುಚ್ಚಿ ನಿದ್ರೆಗೆ ಜಾರಿದಾಗ ನಾನು ಎಚ್ಚೆತ್ತು ಕುಳಿತು ಅದನ್ನು ತದೇಕ ಚಿತ್ತದಿಂದ ವೀಕ್ಷಿಸುತ್ತಿದ್ದೆ. ಅದು ಎಚ್ಚತ್ತು ಕಣ್ಣು ಬಿಟ್ಟಾಗ ನಾನು ಮಲಗಿ ಅದರ ವಿವಿಧ ಭಂಗಿಗಳ ಫೋಟೊ ಕ್ಲಿಕ್ಕಿಸುತ್ತಿದ್ದೆ.

ಪಾರಿವಾಳಕ್ಕಿಂತ ಸ್ವಲ್ಪ ದೊಡ್ಡ ಗಾತ್ರದ ಹಕ್ಕಿ ಇದು. ಇದರ ಕಂದು-ಬೂದು ಮಿಶ್ರಿತ ದೇಹದ ಮೇಲೆ ಕಪ್ಪು ಗೀರುಗಳಿವೆ. ಗಂಟಲ ಎರಡೂ ಬದಿಗಳಲ್ಲಿ ಎದ್ದು ಕಾಣುವ ಬಿಳಿ ಪಟ್ಟಿ. ಇದರ ಕೊಕ್ಕು ಕಪ್ಪೆಯ ಬಾಯಿಯಂತೆ ಅಗಲವಾಗಿ ಗಿಡ್ಡದಾಗಿದೆ. ಚಿಕ್ಕದಾಗಿರುವ ಈ ಕೊಕ್ಕಿನ ಮೇಲ್ಭಾಗದಲ್ಲಿ ಮೀಸೆಯಂತೆ ಕೂದಲುಗಳು ಇರುತ್ತವೆ. ಕೊಕ್ಕಿನಲ್ಲಿ ಉಸಿರಾಟಕ್ಕೆ ಬೇಕಾದ ರಂಧ್ರಗಳು ಸ್ಪಷ್ಟವಾಗಿ ಕಾಣುತ್ತವೆ. ಮಣ್ಣಿನ ಮೇಲೆ ಕುಳಿತರೆ ಗೊತ್ತಾಗದಿರುವಷ್ಟು ಜಟಿಲವಾದ ವರ್ಣ ಸಂಯೋಜನೆ ಈ ಹಕ್ಕಿಯದ್ದು. ಹಾರಿದಾಗ ರೆಕ್ಕೆಗಳ ಮೇಲಿರುವ ಬಿಳಿ ಪಟ್ಟೆ ಸ್ಪಷ್ಠವಾಗಿ ಗೋಚರಿಸುತ್ತದೆ. ಕಣ್ಣುಗಳು ಕೆಂಪಾಗಿವೆ, ಹಾಗಾಗಿ ನೋಡಲು ಕೊಂಚ ಭಯವೆನಿಸುತ್ತದೆ. **ಕುರುಡುಗಪ್ಪಟ ಹಕ್ಕಿ** ಗೂಬೆಯಂತೆ ನಿಶಾಚರಿ ಹಕ್ಕಿಯಾಗಿದ್ದು ಮುಸ್ಸಂಜೆ ನಂತರ ಮೆಲುದನಿಯ ಕೂಗಿನಿಂದ ಇದರ ಚಟುವಟಿಕೆ ಆರಂಭ. ಇದರ ಕೂಗು ಚುಳುಕ್... ಚುಳುಕ್... ಚುಳುಕ್... ಎಂದು ನೀರಿನಲ್ಲಿ ಕಲ್ಲು ಹಾಕಿದಾಗ ಶಬ್ಧ ಬಂದಂತೆ ಇರುತ್ತದೆ. ಕುರುಚಲು ಕಾಡು, ಬಂಡೆ ಪ್ರದೇಶ, ಬಂಡೆನೆಲೆದ ಮೇಲೆ ಇದರ ವಾಸ, ಇದರ ಆಹಾರ

ರಾತ್ರಿ ಸಮಯದಲ್ಲಿ ಹಾರಾಡುವ ಕೀಟಗಳು, ದುಂಬಿ, ರೆಕ್ಕೆಗೊದ್ದ, ಪತಂಗ, ಮಿಡತೆ, ಕಂಬಳಿಹುಳು ಕೀಟಗಳು ಮತ್ತು ಕೀಟಗಳ ಮೊಟ್ಟೆಯೂ ಹೌದು. ಕೆಲ ಸಲ ಸೊಳ್ಳೆಗಳನ್ನು ಸಹ ಪಕ್ಷಿ ಭಕ್ಷಿಸುತ್ತವೆ. ಹಾರುತ್ತಲೇ ಕೀಟಗಳನ್ನು ಬೇಟೆಯಾಡಿ ಹಿಡಿಯುವ ಇವು ಬಲು ಚತುರ ಪಕ್ಷಿಗಳು. ನತ್ತಿಂಗಗಳನ್ನು ಮೊದಲು "Goat suckers" ಎಂದು ಕರೆಯುತ್ತಿದ್ದರು. ಇವು ರಾತ್ರಿ ಹೊತ್ತಿನಲ್ಲಿ ಕುರಿ-ಆಡುಗಳ ಕೊಟ್ಟಿಗೆಗೆ ಬಂದು ಅಲ್ಲಿರುವ ಉಣ್ಣೆ, ಕೀಟಗಳನ್ನು ತಿನ್ನುತ್ತವೆ. ಆದರೆ ಅದನ್ನು ರೈತ ಜನರು, ತಪ್ಪಾಗಿ ಗ್ರಹಿಸಿ ಈ ಹಕ್ಕಿಗಳು ಆಡಿನ ಹಾಲು ಕುಡಿಯಲು ಬರುತ್ತವೆ ಎಂದು ಭಾವಿಸಿದ್ದರು, ಹಾಗಾಗಿ ಈ ಹೆಸರು ಬಂದಿದೆ ಎಂಬ ಮಾತಿದೆ.

ಕುರುಡುಗಪ್ಪಟ ಹಕ್ಕಿಯನ್ನು ಅಡಕಪನಹಕ್ಕಿ, ನತ್ತಿಂಗ, ನೆಲರಾವು, ನೆಲಗೂಗಿ ಅಂತೆಲ್ಲ ಕರೆದು ಆಂಗ್ಲಭಾಷೆಯಲ್ಲಿ ಇಂಡಿಯನ್ ನೈಟ್ ಜಾರ್ ಅಥವಾ ಕಾಮನ್ ನೈಟ್ ಜಾರ್ (Indian Nightjar Or Common Nightjar) ಎಂದು ಕರೆದು ವೈಜ್ಞಾನಿಕವಾಗಿ ಕ್ಯಾಪ್ರಿಮುಲ್ಗುಸ್ ಏಶಿಯಾಟಿಕಸ್ (Caprimulgus asiaticus) ಹೆಸರಿಸಿ ಕ್ಯಾಪ್ರಿಮುಲ್ಗಿಫಾರ್ಮಿಸ್ (Caprimulgiformes) ಗಣದ ಕ್ಯಾಪ್ರಿಮುಲ್ಗಿಡೇ (Caprimulgidae) ಕುಟುಂಬಕ್ಕೆ ಸೇರಿಸಿದ್ದಾರೆ. ಪ್ರಪಂಚದಾದ್ಯಂತ ೮೬ ಪ್ರಬೇಧದ ನತ್ತಿಂಗಗಳಿದ್ದು ಅದರಲ್ಲಿ ಭಾರತದಲ್ಲಿ ೯ ಹಾಗೂ ಕರ್ನಾಟಕದಲ್ಲಿ 5 ಪ್ರಬೇಧಗಳಿರುವ ಬಗ್ಗೆ ದಾಖಲಾತಿಯಿದೆ.



ಗಂಡು ಮತ್ತು ಹೆಣ್ಣು ಎರಡು ಹಕ್ಕಿಗಳು ಒಟ್ಟೊಟ್ಟಿಗೆ ಇರುತ್ತವೆ. ಇವುಗಳ ಸಂತಾನಾಭಿವೃದ್ಧಿ ಸಮಯವು ಫೆಬ್ರುವರಿ ಯಿಂದ ಸೆಪ್ಟೆಂಬರ್ ತಿಂಗಳಾಗಿದ್ದು ನೆಲವನ್ನು ಕೆದರಿ ಗುಳಿಮಾಡಿ ತಿಳಿಗುಲಾಬಿ ವರ್ಣದ ಕೆಂಪು ಮಿಶ್ರಿತ ಕಂದು ಚುಕ್ಕಿಗಳಿರುವ ಎರಡು ಮೊಟ್ಟೆಗಳನ್ನು ಮರಿ ಮಾಡುತ್ತವೆ ಸಾಮಾನ್ಯವಾಗಿ ಹೆಣ್ಣು ಹಕ್ಕಿ ಕಾವು ಕೊಡುವ ವೇಳೆ ಗಂಡು ಹಕ್ಕಿ ಅದರ ಸುತ್ತ ಮುತ್ತಲು ಅಡ್ಡಾಡಿಕೊಂಡಿರುತ್ತದೆ. ವೈರಿ ಹಕ್ಕಿಗಳ ದಾಳಿ ಆಗದಂತೆ ಸೈನಿಕನಂತೆ ಕಾರ್ಯ ನಿರ್ವಹಿಸುತ್ತದೆ. ರಾತ್ರಿ ವೇಳೆಯಲ್ಲಿಯೇ ಆಹಾರಕ್ಕಾಗಿ ಅಲೆದಾಡುವ ಈ ಹಕ್ಕಿಗಳು ಯಾವುದೇ ಕಾರಣಕ್ಕೂ ಮೊಟ್ಟೆಗಳಿಂದ ದೂರ ಇರುವುದಿಲ್ಲ. ಏಕೆಂದರೆ ರಾತ್ರಿ ವೇಳೆಯಲ್ಲಿ ಗೂಬೆ ಮತ್ತು ಹೆಗ್ಗಣಗಳು ಮೊಟ್ಟೆಗಳನ್ನು ತಿಂದು ಮುಗಿಸುವ ಸಾಧ್ಯತೆ ಇರುತ್ತದೆ. ಹಗಲಿನಲ್ಲಿ ಹೆಣ್ಣು ಹಕ್ಕಿ ಮಾತ್ರ ಮೊಟ್ಟೆಗಳ ಮೇಲೆ ಸಂಜೆಯಾಗುವ ತನಕ ಕುಳಿತೇ ಇರುತ್ತದೆ.

ಮೊಟ್ಟೆ ಇಟ್ಟ ಸಂದರ್ಭದಲ್ಲಿ ಆಹಾರ ಅರಸಿ ಒಂದು ಹಕ್ಕಿ ದೂರ ಹಾರಿ ಹೋದಾಗ ಮತ್ತೊಂದು ಹಕ್ಕಿ ಮೊಟ್ಟೆಗಳಿಗೆ ಕಾವು ಕೊಡುತ್ತದೆ. ಅಂದರೆ ಗಂಡು ಹಾಗೂ ಹೆಣ್ಣು ಹಕ್ಕಿಗಳೆರಡೂ ಸಾಮಾನ್ಯವಾಗಿ ಮೊಟ್ಟೆಗಳಿಗೆ ಕಾವು ಕೊಡುತ್ತವೆ. ಕತ್ತಲಾಗುತ್ತಿದ್ದಂತೆ ಗಂಡು ಹಕ್ಕಿಯ ಸರದಿ. ಆಗ ಹೆಣ್ಣು ನೈಟ್ ಜಾರ್ ಹಕ್ಕಿ ಹೊಟ್ಟೆ

ತುಂಬಿಸಿಕೊಳ್ಳಲು ದೂರ ಹಾರಿ ಹೋಗುತ್ತದೆ. ನೈಟ್ ಜಾರ್ ಹಕ್ಕಿಗಳ ಸಂತತಿ ಈಗ ಕಡಿಮೆ ಆಗುತ್ತಿದೆ. ಆದುದರಿಂದಾಗಿ ಅವುಗಳ ದರ್ಶನಭಾಗ್ಯವೂ ಕಷ್ಟ. ನೈಟ್ ಜಾರ್ ಹಕ್ಕಿಯು ಗಡದ್ದಾಗಿ ಕುಂಭಕರ್ಣ ನಿದ್ರೆಗೆ ಜಾರಿತು. ಸೂರ್ಯನ ತಾಪ ಅಧಿಕವಾಗಿ ನಾವು ನಿಧಾನವಾಗಿ ಅಲ್ಲಿಂದ ಮರಳಿ ಮನೆಯತ್ತ ನಡೆದೆವು. ಆಧುನಿಕತೆಯ ನಗರೀಕರಣ ಬರದಲ್ಲಿ ವಿನಾಶದತ್ತ ತಳ್ಳುತ್ತಿರುವ ಇಂಥಹ ಅನೇಕ ಪಕ್ಷಿಗಳನ್ನು, ನಿಶಾಚರಿಯಾಗಿ ರೈತರಿಗೆ ಪೀಡೆ ಕೀಟಗಳನ್ನು ಹಿಡಿದು ಭಕ್ಷಿಸಿ ರೈತ ಮಿತ್ರ ಹಕ್ಕಿಗಳ ಸಂತತಿಯನ್ನು ಉಳಿಸಿಕೊಳ್ಳಲು ಪ್ರತಿಜ್ಞೆ ಮಾಡೋಣ...







ಚಿತ್ರ-ಲೇಖನ
ಶಶಿಧರಸ್ವಾಮಿ ಆರ್. ಹಿರೇಮಠ
ಕದರಮಂಡಲಗಿ

# ವನದಾಳದ ಮಾತು



ಪ್ರಕಾಶ್ ಹೊನ್ನಕೋರೆರವರು ಮೂಲತಃ ವಿಜಯಪುರ ಜಿಲ್ಲೆಯ ಚಡಚಣ ತಾಲ್ಲೂಕಿನವರು. ಕಳೆದ ಎಂಟು ವರ್ಷಗಳಿಂದ ವಿಶೇಷ ಹುಲಿ ಸಂರಕ್ಷಣಾ ದಳ ಬಂಡೀಪುರ ಹಾಗು ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶಗಳಲ್ಲಿ ಅರಣ್ಯ ರಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಕಳೆದ ನಾಲ್ಕು ವರ್ಷಗಳಿಂದ ಇಲಾಖಾ ಶ್ವಾನವಾದ ರಾಣಾನನ್ನು ಇವರು ನೋಡಿಕೊಳ್ಳುತ್ತಿದ್ದಾರೆ. ಕಾಡು ಮತ್ತು ವನ್ಯಜೀವಿಗಳ ಬಗ್ಗೆ ಅಪಾರವಾದ ಆಸಕ್ತಿ ಹೊಂದಿದ್ದಾರೆ. ಇವರು ಸಾಕಷ್ಟು ಕಾಡಿನ ಅನುಭವಗಳನ್ನು ಕತೆಯಾಗಿಸಿದ್ದಾರೆ.

## ಕಗ್ಗತ್ತಲ ಕಾನನದಲ್ಲಿ ಕಾಡಾನೆಯಿಂದ ತಪ್ಪಿಸಿಕೊಂಡ ಕತೆ

ಮುಂದುವರಿದ ಭಾಗ….

ಚೆನ್ನಯ್ಯ ಅಲ್ಲಿರುವ ಸೌದೆಗಳನ್ನು ಜೋಡಿಸಿ ಬೆಂಕಿ ಹಾಕಲು ಶುರು ಮಾಡಿದ, ಹಾಗೆ ತನ್ನ ಜೇಬಿನಿಂದ ಗಣೇಶ್ ಬೀಡಿ ತಗೆದು ಬೆಂಕಿ ಹಚ್ಚಿ ಸೇದಲು, ಬಾಯಿಯಿಂದ ಬರುತ್ತಿರುವ ಹೊಗೆಯು ಹಳೆ KSRTC ಬಸ್ಸಿಂದ ಬರುವ ಹೊಗೆಯ ಹಾಗೆ ಬಿಡ್ತಾ, ಶನಿ ಮಹಾತ್ಮೆಯ ಕೆಲವು ಹಾಡುಗಳನ್ನು ಹೇಳಲು ಶುರು ಮಾಡಿದ. ಅಲ್ಲೇ ಇದ್ದ ನಮ್ಮ ಬಸಯ್ಯ ಮಾತ್ರ ಚೆನ್ನಯ್ಯನ ಹಾಡುಗಳನ್ನೇ ತನ್ನ ಲಾಲಿ ಹಾಡು ಎಂದು ತಿಳಿದು ಅಂತಹ ಭಯಾನಕ ಜಾಗದಲ್ಲೂ ಗೊರಕೆಹೊಡಿಯುತ್ತ ನಿದ್ದೆಗೆ ಜಾರಿದ. ಆದ್ರೆ ಮಂಜು ಮಾತ್ರ ಕೈಯಲ್ಲಿದ್ದ ಕೋವಿಯನ್ನು ಪರೀಕ್ಷೆ ಮಾಡುತ್ತ ಕಗ್ಗತ್ತಲ ರಾತ್ರಿಯಲ್ಲಿ ಯಾವುದಕ್ಕೋ ಗುರಿ ಇಡುವ ಹಾಗೆ ಮಾಡಿ ಕೋವಿಯನ್ನು ತೆಗೆದು ತನ್ನ ಪಕ್ಕಕ್ಕಿಟ್ಟ. ನಾವು ಕೆಲ್ಸ ಮಾಡೋ ಊರಿಗೆ ತುಂಬಾ ಹತ್ತಿರದ ಊರಿನವನಾದ ಸಂಜಯ ಮಾತ್ರ ಯಾವುದನ್ನೂ ಲೆಕ್ಕಿಸಿದೆ ಬೆಂಕಿ ಕಾಯಿಸುತ್ತ ಕುಳಿತಿದ್ದ. ಚೆನ್ನಯ್ಯ ತನ್ನ ಬೀಡಿ ಸೇದಿದ ನಂತರ ತನ್ನ ಕಾಡಿನ ಅನುಭವಗಳನ್ನು ಹೇಳಲು ಶುರು ಮಾಡಿದ. ಅವನು ಹುಟ್ಟಿದ್ದು-ಬೆಳೆದಿದ್ದು ಎಲ್ಲಾ ಕಾಡು ಆಗಿರೋದ್ರಿಂದ ಅವನ ಕಥೆಗಳು ತುಂಬಾ ಭಯಾನಕವಾಗಿ ಕೇಳ್ತಾ ಇರೋರು ಅಲ್ಲೇ ಮೂರ್ಛೆ ಹೋಗೋ ತರ ಇದ್ವು, ನಾವು ಮೊದ್ಲೇ ಭಯಗೊಂಡಿದ್ದರಿಂದ ಮಂಜು ಚೆನ್ನಯ್ಯನ್ನನ್ನು ತಡೆದ. ಅವನು ಹೇಳಿದ ಒಂದು ದೆವ್ವದ ಕಥೆ ನನ್ನನ್ನು ತುಂಬಾ ಹೆದರಿಸಿಬಿಟ್ಟಿತು.

ಅದ್ರಲ್ಲೂ ಕಾಡಿನಲ್ಲಿ ಈ ಹೊತ್ತಿನಲ್ಲಿ ಯಾವುದಾದ್ರೂ ದೆವ್ವ ಬಂದ್ರೆ ಏನಪ್ಪ ಮಾಡೋದು ಅಂತ ಚಿಂತೆಯಾಯಿತು. ಯಾಕಂದ್ರೆ ನಮ್ಮಿಂದ 5 ಮೀಟರ್ ದೂರದಲ್ಲಿ ಒಂದು ದೊಡ್ಡ ಆನೆ ಬಂದ್ರು ಗೊತ್ತಾಗದಿರೋ ಅಷ್ಟು ಕಗ್ಗತ್ತಲು. ಆಗಲೇ ನಂಗೆ ಭಯ ಶುರು ಆಗಿ ಜೀವ ಕೈಗೆ ಬರೋ ಹಾಗೆ ಆಗಿತ್ತು. ಅಷ್ಟೋತ್ತಿಗಾಗ್ಲೆ ದೂರದ ಹೊಲಗಳಿಂದ ನಾಯಿಗಳು ಜೋರಾಗಿ ಬೊಗಳುವ ಶಬ್ಧಗಳು ಬರಲು ಪ್ರಾರಂಭವಾಯಿತು. ಅದನ್ನ ಕೇಳಿ ನಮ್ಮ ಕಾಡಲ್ಲಿ ಇರುವ ಕಾಡುನಾಯಿಗಳು ಕೂಡ ನಾವು ಯಾರಿಗೂ ಕಡಿಮೆ ಇಲ್ಲ ಅನ್ನೋ ಹಾಗೆ ಅರಚಲು ಪ್ರಾರಂಭಿಸಿದವು.



ಆ ಶಬ್ಧಗಳು ಬರ್ತಾ ಇರೊದನ್ನ ಕೇಳಿದ ಮಂಜು ಬೇರೆ ಯಾವುದೋ ಕಡೆ ಇಂದ ಆನೆಗಳು ಹೊಲಕ್ಕೆ ದಾಳಿ ಮಾಡಿವೆ ಅಂದ. ಅಷ್ಟೊತ್ತಿಗೆ ಸಮಯ ಸುಮಾರು 1 ಗಂಟೆ 30 ನಿಮಿಷ. ಇದನ್ನು ಕೇಳಿದ ಚೆನ್ನಯ್ಯನಿಗೆ ಕೋಪ ನೆತ್ತಿಗೆ ಏರಿತು. ಇಷ್ಟು ನಡು ರಾತ್ರಿಯಲ್ಲಿ ನಮ್ಮ ಜೀವದ ಹಂಗು ತೊರೆದು ಕಾಯ್ತಾ ಇದ್ರು, ಈ ದರಿದ್ರದ ಆನೆಗಳು ಮಾತ್ರ ನಮ್ಮ ಕಣ್ಣು ತಪ್ಪಿಸಿ ಗದ್ದೆಗಳಿಗೆ ಹೋಗಿ ನಮ್ಮನ್ನು ಅಧಿಕಾರಿಗಳಿಂದ ಬೈಸಿಕೊಳ್ಳೋ ಹಾಗೆ ಮಾಡುತ್ತವೆ ಅಂದ. ಅದೇ ಕೋಪಕ್ಕೆ ತನ್ನ  ಕಿಸೆಯಿಂದ ಇನ್ನೊಂದು ಬೀಡಿ ತೆಗೆದು ಬೆಂಕಿ ಹಚ್ಚಿದ. ಆಮೇಲೆ ತನ್ನಲ್ಲಿರುವ ಪಟಾಕಿ ತೆಗೆದು ಅದಕ್ಕೆ ಕಡ್ಡಿ ಗೀರಿದ. ಚೆನ್ನಯ್ಯ ಹಚ್ಚಿದ ಪಟಾಕಿ ಶಬ್ಧಕ್ಕೆ ಒಂದು ಕ್ಷಣ ಕಾಡು ನಡುಗಿ ಹೋಯಿತು. ಪ್ರಶಾಂತ ಸರೋವರದಲ್ಲಿ ಸುನಾಮಿ ಎದ್ದ ಹಾಗೆ ಆಗಿ!  ಆ ಶಬ್ಧಕ್ಕೆ ಕಾಡೊಳಗಿರಿರುವ ಪಕ್ಷಿಗಳು ಕ್ರ ಕರ್ ಕಿರ್ ಎಂದು ವಿಕೃತವಾಗಿ ಶಬ್ಧಮಾಡತೊಡಗಿದವು. ಅದೇ ಸಮಯಕ್ಕೆ ಊರು ನಾಯಿಗಳ ಕಿರುಚಾಟ ಇನ್ನು ತುಂಬಾ ಹೆಚ್ಚಾಗುತ್ತಾ ಹೋಯಿತು ಆವಾಗ ಅಂದಾಜು ಸಮಯ ಬೆಳಗಿನ 2 ಗಂಟೆ 45 ನಿಮಿಷ. ಸಮಯ ಮುಗಿತಾ ಬಂದಿರೋದ್ರಿಂದ ನಾವು ಅಲ್ಲಿಂದ ವಾಪಸ್ ಹೋಗೋಣ ಅಂತ ನಿರ್ಧರಿಸಿದ್ವಿ.

ನಮ್ಮ ತಂಡದ ಕುಂಭಕರ್ಣನಾದ ಬಸಯ್ಯನನ್ನು ಎಬ್ಬಿಸಿಕೊಂಡು ಅಲ್ಲಿಂದ ನಿಧಾನವಾಗಿ ನಾವೆಲ್ಲರೂ ಎದ್ದು ಹೋಗ್ತಾ ಇರಬೇಕಾದ್ರೆ ಮಂಜು ನಾವು ಹೋಗೋ ದಾರಿಯನ್ನು ಬದಲಾಯಿಸಿದ. ಅದಕ್ಕೆ ಕಾರಣ ಇಷ್ಟೇ ನಮಗೆ ಅವಾಗ ದೂರದ ಹೊಲದಿಂದ ನಾಯಿಗಳು ಕೂಗ್ತಾ ಇರೋ ಶಬ್ಧ ಬಂದಿರೋದ್ರಿಂದ ಇವತ್ತು ನಾವು ರೈತರನ್ನು ಮಾತಾಡಸ್ತಾ ಹೋಗೋಣ ಎಂದ. ಅದಕ್ಕೆ ಎಲ್ರು ಆಯಿತು ಎಂದು ಹೋಗ್ತಾ ಇರಬೇಕಾದ್ರೆ ನಿಧಾನವಾಗಿ ಪಶ್ಚಿಮದ  ಕಡೆಯಿಂದ ತಂಗಾಳಿ ಬರಲು ಪ್ರಾರಂಭಿಸಿತು. ಇದು ಮಳೆಯ ಮುನ್ಸೂಚನೆ ಎಂದು ನಮ್ಮ ತಂಡದ ಚಾಣಕ್ಯನಾದ ಚೆನ್ನಯ್ಯ ಹೇಳಿದ, ಹಾಗೆ ಸುಮಾರು 1.5 ಕಿಲೋ ಮೀಟರ್ ಬರಬೇಕಾದ್ರೆ

ಕಂದಾಯದ ಭೂಮಿಗಳು ಪ್ರಾರಂಭವಾದವು. ಕಾಡಂಚಿನಲ್ಲಿ ವಾಸಿಸುತ್ತಿರುವ ರೈತರು ತಮ್ಮ ಹೊಲಗಳಲ್ಲಿರುವ ದೊಡ್ಡ ದೊಡ್ಡ ಮರಗಳ ಮೇಲೆ ಅಟ್ಟಣಿ ಮಾಡ್ಕೊಂಡು ಆನೆ ಕಾಯುತ್ತ ಇರ್ತಾರೆ. ಹಾಗೆ ಸ್ವಲ್ಪ ದೂರ ಹೋದ ಮೇಲೆ ಅಲ್ಲೆ ಇದ್ದ ಒಬ್ಬ ರೈತ ಕೈಯಲ್ಲಿ ಟಾರ್ಚ್ ಹಿಡಿದು ನಮ್ಮ ಕಡೆ ಬಿಡ್ತಾ "ಸಾರ್ ಇವಾಗ ಈ ಕಡೆ ಇಂದ ಜೋರಾಗಿ ಜನ ಕಿರುಚಾಡ್ತಾ ಇದ್ರು " ಅಂತ ಹೇಳಿದ. ಆವಾಗ ನಮಗೆ ಯಾರದೋ ಹೊಲಕ್ಕೆ ಆನೆ ಬಂದಿದೆ ಅಂತ ಖಾತ್ರಿಯಾಯಿತು. ಹಾಗೆ ಹುಷಾರಾಗಿ ಆನೆ ಎಲ್ಲಾದ್ರೂ ಇದಿಯಾ ಅಂತ ನೋಡ್ತಾ ಹೆಜ್ಜೆ ಮೇಲೆ ಹೆಜ್ಜೆ ಹಾಕ್ತಾ ಒಬ್ಬರ ಹಿಂದೆ ಒಬ್ಬರ ನಡಿಗೆ ಸಾಗ್ತಾ ಇತ್ತು. ಹಾಗೆ ಅಲ್ಲಿಂದ ನಿಧಾನವಾಗಿ ಗದ್ದೆ ಮೇಲೆ ನಡೀತಾ ಸಾಗಿದ್ವಿ ಎಲ್ಲರಿಗಿಂತ ಮುಂಚೆ ಮಂಜು, ನಂತ್ರ ಸಂಜಯ್ ಆಮೇಲೆ ನಾನು ನನ್ನ ಹಿಂದೆ ಚೆನ್ನಯ್ಯ ಅವನ ಹಿಂದೆ ಬಸಯ್ಯ. ಇದ್ದದ್ದು. ಈ ಸಲ ಮಂಜು ನಮ್ಮ ತಂಡದ ಮುಂದಾಳತ್ವ ವಹಿಸಿದ್ದ ಹಾಗೆ ಯಾವುದಾದ್ರು ಪ್ರಾಣಿಯಿಂದ ಕಾಯುವ ಜವಾಬ್ದಾರಿ ಚೆನ್ನಯ್ಯ ತೆಗೆದುಕೊಂಡಿದ್ದ ಏಕಂದ್ರೆ ನಮ್ಮ ಆಯುಧ ಕೋವಿಯ ಜವಾಬ್ದಾರಿ ಚೆನ್ನಯ್ಯನ ಮೇಲಿತ್ತು. ಹಾಗೆ ಸುಮಾರು 1 ಕಿ ಮಿ ನಡೆದ ನಂತರ ನಮಗೆ ಒಂದು ಊರುಸಿಕ್ತು.



ಊರು ಸಮೀಪಿಸ್ತಾ ಹಾಗೆ ಊರಲ್ಲಿರುವ ನಾಯಿಗಳು ಬೊಗಳುವುದು ಹೆಚ್ಚಾಯಿತು. ಇಲ್ಲಿಂದ ನಮ್ಮ ಕ್ಯಾಂಪಿಗೆ ಸುಮಾರು 4 ಕಿ ಮಿ. ಅದು ಫುಲ್ ಟಾರ್ ರೋಡ್ ಆಗಿತ್ತು. ಈಗ ಊರಲ್ಲಿರೋದ್ರಿಂದ ನನ್ನ ಭಯ ಸ್ವಲ್ಪ ಕಡಿಮೆಯಾಗಿತ್ತು. ಆವಾಗಲೇ ನಿಧಾನವಾಗಿ ಮಳೆ ಶುರುವಾಯಿತು. ಇರೋದು 2 ಛತ್ರಿ ಒಂದ್ರಲ್ಲಿ ಬಸಯ್ಯ ಮತ್ತು ಚೆನ್ನಯ್ಯ ಇನ್ನೊಂದ್ರಲ್ಲಿ ನಾನು, ಮಂಜು ಮತ್ತು ಸಂಜಯ. ಹೀಗೆ ಸುಮಾರು 2.5 ಕಿ ಮಿ ಮಾತಾಡ್ತಾ ಮಾತಾಡ್ತಾ ಬರ್ತಾ ಇದ್ವಿ. ಸ್ವಲ್ಪ ಮಳೇನು ಕಡಿಮೆ ಆಗಿತ್ತು ಅಷ್ಟೊತ್ತಿಗಾಗಲೇ ನಮ್ಮ ಬಟ್ಟೆಗಳು ಸ್ವಲ್ಪ ತೋಯ್ದು ಹೋಗಿದ್ವು. ನಮ್ಮ ಕ್ಯಾಂಪ್ಗೆ ಹೋಗೋ ದಾರಿ ತುಂಬಾ ಕಿರಿದಾಗಿತ್ತು. ಅದಲ್ಲದೇ ಎರಡೂ ಕಡೆ ಕಂದಾಯ ಭೂಮಿ ಇರೋದ್ರಿಂದ ಅಲ್ಲಿ ಕೆಲವು ತೆಂಗಿನ ತೋಟಗಳಿದ್ದವು. ಅವುಗಳಿಗೆ ದುರಂತಾ ಎನ್ನುವ ಗಿಡಗಳಿಂದ ಬೇಲಿ ಮಾಡ್ಕೊಂಡಿದ್ರು ಮತ್ತು ಅವು ತುಂಬಾ ಗಟ್ಟಿಯಾಗಿದ್ದವು. ರೋಡಿನ ಎರಡು ಬದಿ ಚರಂಡಿ ಇತ್ತು.

ನಮಗೆ ಸರ್ಕಾರ ನೀಡಿದ್ದ ಕೆಂಪು ಚರ್ಮದ ಬೂಟು ನಡೆಯುತ್ತಿದ್ದರೆ ರಸ್ತೆಯಿಂದ ಟಕ್ ಟಕ್ ಟಕ್ ಅಂತ ಶಬ್ದ ಬರ್ತಾ ಇತ್ತು. ನಮ್ಮ ಬೂಟು ಮಾಡುವ ಸದ್ದು ಆ ರಾತ್ರಿಯಲ್ಲಿ ಎಲ್ಲೋ ಸೈನಿಕರ ಕವಾಯತನ್ನು ಮಾಡುವಾಗ ಬರುವ ಸದ್ದಿನ ಹಾಗೆ ಕೇಳ್ತಾ ಇತ್ತು. ನಾನು,ಮಂಜು ಮತ್ತು ಸಂಜು ಮುಂದೆ ಮಾತಾಡ್ತಾ ಹೋಗ್ತಾ ಇದ್ವಿ, ಚೆನ್ನಯ್ಯ ಹಾಗೂ ಬಸಯ್ಯ ಹಿಂದೆ ಬರ್ತಾ ಇದ್ರು. ಚೆನ್ನಯ್ಯ ನಮ್ಮ ರಕ್ಷಣೆಗೆ ನೀಡಿದ್ದ ಕೋವಿಯನ್ನು ಹಿಡಿದುಕೊಂಡು ಬರ್ತಾ ಇದ್ದ. ಹೀಗೆ ಮಾತಾಡ್ತಾ ಮಾತಾಡ್ತಾ ಬರ್ತಾ ಇರುವಾಗ ನಮ್ಮ ಎಡ ಭಾಗದ ಬೇಲಿಯ ಕಡೆ ಇಂದ ಏನೋ ಒಂದು ರೀತಿಯ ತಿನ್ನೋ ತರ ಶಬ್ಧ ಬರ್ತಾ ಇತ್ತು. ಅದು ನೀರವ ಮೌನ ಆವರಿಸಿರುವ ಜಾಗ, ಅಮಾವಾಸ್ಯೆ ಮುಗಿದು ಕೇವಲ ಮೂರು ದಿನ ಆಗಿದ್ದರಿಂದ ನಮ್ಮ ಪಕ್ಕದಲ್ಲಿ ಏನು ಇದೆ ಎಂದು ತಿಳಿಯಲು ಕೂಡ ಆಗದೆ ಇರೋ ಅಷ್ಟು ಕಗ್ಗತ್ತಲು. ನಾನೆಲ್ಲೋ ಚೆನ್ನಯ್ಯ ಹೇಳಿರೋ ದೆವ್ವ ಬಂದು ಇನ್ನೊಂದು ದೆವ್ವದ ಜೊತೆ ಮಾತಾಡ್ತಾ ಕುಳಿತಿದೆ ಅನ್ಕೊಂಡಿದ್ದೆ.

ನಮ್ಮ ಪಕ್ಕದಲ್ಲಿ ಅಂದ್ರೆ ಕೇವಲ 10 ಮೀಟರ್ ದೂರದಲ್ಲಿ ಇರೋದು ತೆಂಗಿನ ತೋಟ ಎಂದು ಚೆನ್ನಯ್ಯ ಹೇಳಿದ ಮೇಲೆಯೇ ತಿಳಿಯಿತು. ಚೆನ್ನಯ್ಯ ಅಷ್ಟು ಹೇಳುವಷ್ಟರಲ್ಲಿ ನಾವು ಮಾತಾಡ್ತಾ ಇರೋದನ್ನ ಅದು ಯಾವಾಗ ಕೇಳಿಸಿಕೊಂಡಿತ್ತೋ ಆ ದೇವ್ರೇ ಬಲ್ಲ. ತನ್ನ ಇಡೀ ರೋಷಾವೇಶಗಳನ್ನು ತಗೆದುಕೊಂಡು ತುಂಬಾ ಜೋರಾಗಿ ಘೀಳಿಡ್ತು. ಆನೆಯು ಮಾಡಿದ ಆ ಶಬ್ದಕ್ಕೆ ನಾವೆಲ್ಲರು ಬೆಚ್ಚಿಬಿದ್ವಿ. ತೋಟದಲ್ಲಿ ತೆಂಗಿನಕಾಯಿಗಳನ್ನು ತಿನ್ನುತ್ತಾ ಇತ್ತು ಅನ್ಸುತ್ತೆ, ತುಂಬಾ ವೇಗವಾಗಿ ಅಲ್ಲಿರುವ ದುರಂತಾದ ಬೇಲಿಯನ್ನು ನುಗ್ಗಿ ನಮ್ಮೆಡೆಗೆ ಘೀಳಿಡುತ್ತಾ ಓಡಿ ಬಂದಿತು. ಚೆನ್ನಯ್ಯ ಮತ್ತು ಬಸಯ್ಯ ತಮ್ಮ ಕೈಯಲ್ಲಿರುವ ಕೋವಿಯನ್ನು ಬಿಸಾಡಿ, ಊರು ಕಡೆ ಓಡಿಹೋಗಿಬಿಟ್ರು, ನಮಗೆ ತಪ್ಪಿಸಿಕೊಳ್ಳಲು ಜಾಗ ಬೇರೆ ಇರ್ಲಿಲ್ಲ, ಹಾಗೆ ನನ್ನ ಜೊತೆಗಿದ್ದ ಮಂಜುಕೂಡ ಕಾಲಿಗೆ ಬುದ್ಧಿ ಹೇಳಿದ. ಮೊದ್ಲೇ ಅವನು ಓಟಗಾರ ಹಾಗೆ ನೋಡ್ತಾ ನೋಡ್ತಾನೆ ಅವನು ಓಡಲು ಶುರುಮಾಡಿದ ಅವನ ಹಿಂದೆ ನಮ್ಮ ಸಂಜಯ ಅವನ ಹಿಂದೆ ನಾನು ನನ್ನ ಹಿಂದೆ ಕಾಡಾನೆ. ಇಷ್ಟೆಲ್ಲ ನಡೆದಿರೋದು ಕೇವಲ 2ರಿಂದ 3 ನಿಮಿಷಗಳಲ್ಲಿ ಅಷ್ಟೇ, ಆನೆಗಳು ನೇರವಾಗಿ ಓಡ್ತಾ ಇದ್ರೆ ಗಂಟೆಗೆ 35 ಕಿಲೋ ಮೀಟರ್ ವೇಗದಲ್ಲಿ ಓಡುತ್ತವೆ. ಹಾಗೆ ಸುಮಾರು 50 ಮೀಟರ್ ಓಡಿರಬಹುದು ಅಷ್ಟೇ, ಹಾಗೆ ಓಡ್ತಾ ಇರಬೇಕಾದ್ರೆ ನನಗೆ ಕಾಲಿಗೆ ಯಾವುದೋ ವಸ್ತು ಬಡಿದು ನಾನು ರೋಡ ಮೇಲೆ ಬಿದ್ದೆ ಆಮೇಲೆ ಗೊತ್ತಾಗಿದ್ದು ನನ್ನ ಕಾಲಿಗೆ ಅಡ್ಡಲಾಗಿ ಬಿದ್ದಿದ್ದು ಸಂಜಯ. (ನಮ್ಮ ಸಂಜಯ್ ಹಾಕಿದ್ದ ಬೂಟು ಕಾಲಿನಿಂದ ಜಾರಿಹೋಗಿ ಅಲ್ಲಿ ಬಿದ್ದಿದ್ದಎಂದು ಆಮೇಲೆ ತಿಳಿಯಿತು) ಮಂಜು ಮಾತ್ರ ಹುಸೇನ್ ಬೋಲ್ಟ್ ತರ ತುಂಬಾ ವೇಗವಾಗಿ ಮುಂದೆ ಓಡಿಹೋಗಿದ್ದ. ನನಗೆ ಇಂದೇ ನನ್ನ ಜೀವನದ ಕೊನೆಯ ಘಳಿಗೆ ಎನಿಸಿಬಿಟ್ಟಿತು. ಆನೆ ಶರವೇಗದಲ್ಲಿ ಬರ್ತಾ ಇರೋ ಸದ್ದು ಭೂಮಿಯಿಂದ ಕೇಳ್ತಾ ಇತ್ತು. ಕೊನೆಬಾರಿಗೆ ಗಣೇಶನನ್ನು ಮನಸಿನಲ್ಲಿಯೇ ನೆನೆದು ಬದುಕಿದ್ರೆ ಕೊನೆವರೆಗೂ ನಿನ್ನ ಭಕ್ತನಾಗಿ ಇರ್ತೀನಿ ಅನ್ನೋ ಪ್ರಮಾಣ ಮಾಡಿದೆ. ದೂರದಲ್ಲೆಲ್ಲೋ ಒಂದು ವಿದ್ಯುತ್ ದೀಪ ಉರಿತಾ ಇತ್ತು ಅದರಿಂದ ಬರುತ್ತಿದ್ದ ಮಬ್ಬು ಬೆಳಕಿನಲ್ಲಿ ನೋಡಿದರೆ ಆನೆ ಓಡುವುದು ಕಾಣುತ್ತಿತ್ತು ನಂಗೆ ಆವಾಗಲೇ ಗೊತ್ತಾಗಿದ್ದು ಅದು ಮಂಜುನನ್ನು ಬೆನ್ನತ್ತಿದೆ ಎಂದು. ಏನಾದ್ರು ಮಾಡಿ ಅವನ್ನನು ಆನೆಯಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡಬೇಕೆಂದು ಧೈರ್ಯಮಾಡಿ ಚೆನ್ನಯ್ಯ ಬಿಸಾಕಿಹೋಗಿದ್ದ ಕೋವಿಯನ್ನು ಕೈಗೆ ಎತ್ತಿಕೊಂಡು ನಿಧಾನವಾಗಿ ನಡೆಯುತ್ತ ಆನೆ

ಹೋಗಿದ್ದ ದಾರಿಯಲ್ಲಿಯೇ ಸ್ವಲ್ಪ ದೂರ ಹಿಂಬಾಲಿಸಿದೆ. ಆದರೆ, ಅಷ್ಟೊತ್ತಿಗಾಗಲೇ ನನ್ನ ಕೈ-ಕಾಲು, ಮೈಗಳಿಂದ ರಕ್ತ ಬರ್ತಾ ಇತ್ತು, ನಾನು ಯಾವುದೇ ಕಾರಣಕ್ಕೂ ನಡೆಯದ ಸ್ಥಿತಿಗೆ ತಲುಪಿದ್ದೆ ಅನ್ನೋದು ಅರ್ಥವಾಗುತ್ತಲೇ ಅಲ್ಲೇ ರೋಡಮೇಲೆ ಮಲಗಿಕೊಂಡೆ. ಸ್ವಲ್ಪ ಸಮಯದ ನಂತರ ಊರು ಕಡೆಯ ದಾರಿಯಿಂದ ಚೆನ್ನಯ್ಯ, ಬಸಯ್ಯ ಮತ್ತು ಆ ತೋಟದ ಯಜಮಾನ ಬಂದು ಕೆಳಗೆ ಬಿದ್ದಿದ್ದ ನನ್ನನ್ನು ಎಬ್ಬಿಸಿಕೊಂಡು ಅದೇ ತೋಟದಲ್ಲಿದ್ದ ಮನೆ ಕಡೆಗೆ ಹೋದರು. ಅಲ್ಲಿಗೆ ಸಂಜಯ ಕೂಡ ಬಂದ. ಸುಮಾರು 150 ಮೀಟರ್ ಓಡ್ತಾ ಹೋದ ಮಂಜು ಕೂಡ ಸಮೀಪದಲ್ಲಿದ್ದ ತಂಬಾಕು ಬ್ಯಾರೇನ್ ಹತ್ರಹೋಗಿ ನಿಂತು ಬಿಟ್ಟಿದ್ದ, ಅಲ್ಲಿ ವಿದ್ಯುತ್ ದೀಪ ಇರೋದ್ರಿಂದ ಅಲ್ಲಿಗೆ ಆನೆ ಬರೋದು ಅನುಮಾನ ಇತ್ತು. ಹಾಗೆ ಅಲ್ಲಿ ಕೆಲ್ಸ ಮಾಡೋ ಕೆಲಸದಾಳುಗಳು ಇದ್ರು.

ಸ್ವಲ್ಪ ಸಮಯದ ನಂತ್ರ ಅದೇ ರಸ್ತೆಯಲ್ಲಿ ಆನೆ ಬರೋದು ಕಾಣಿಸಿತಂತೆ ಆವಾಗಲೇ ಗೊತ್ತಾಗಿದ್ದು ಅದು ಮಖನಾ ಆನೆ ಎಂದು (ಗಂಡು ಆನೆ ಥರ ರೂಪ ಹೊಂದಿದ್ದು ಆದ್ರೆ ಅದಕ್ಕೆ ಯಾವುದೇ ದಂತ ಇರೋದಿಲ್ಲ ಈ ತರದ ಆನೆಗೆ ಮಖನಾ ಅನ್ನುತ್ತಾರೆ). ಆಮೇಲೆ ಅಲ್ಲಿರುವ ಜನ ತುಂಬಾ ಕಿರುಚಾಡಿದಾಗ ಅದು ಮರಳಿ ಕಾಡು ಕಡೆ ಓಡಿ ಹೋಯ್ತುಂತೆ. ಇದಾದ ಸ್ವಲ್ಪ ಸಮಯದ ನಂತರ ಮಂಜು ಸಹ ನಾವಿದ್ದ ಜಾಗಕ್ಕೆ ಬಂದು ನನ್ನ ಸ್ಥಿತಿ ನೋಡಿ ವಾಕಿ ಟಾಕಿಯಿಂದ ಆಫೀಸಿಗೆ ಮೆಸೇಜ್ ಕೊಟ್ಟ, ಸ್ವಲ್ಪ ಸಮಯದ ನಂತರ ನಮ್ಮ ಇಲಾಖೆಯ ವಾಹನದಲ್ಲಿ ಸಮೀಪದ ಆಸ್ಪತ್ರೆಗೆ ಹೋಗಿ ದಾಖಲಾದೆ. ಅಲ್ಲಿ ನನ್ನ ಗಾಯಗಳಿಗೆ ಪ್ರಥಮ ಚಿಕಿತ್ಸೆ ತಗೆದುಕೊಂಡೆ.

ಆದಿನ ನನ್ನ ಪುನರ್ಜನ್ಮ ಹೊಂದಿದ ದಿನ ಅಂದ್ಕೊಂಡು ಅವತ್ತಿನಿಂದ ಗಣೇಶನಿಗೆ ಖಾಯಂ ಭಕ್ತನಾದೆ. ಅವತ್ತೇ ಗೊತ್ತಾಗಿದ್ದು ಜೀವದ ಬೆಲೆ ಏನು ಅಂತ ಮತ್ತು ವನ್ಯಜೀವಿಗಳ ಕೋಪ ಎಂಥದು ಅಂತ. ಈ ಘಟನೆ ನಂತ್ರ ಈ ರೀತಿಯ ಅನೇಕ ಘಟನೆಗಳು ನಡೆದಿವೆ. ಆದ್ರೆ ಈ ಘಟನೆ ಮಾತ್ರ ಇನ್ನೂ ನನ್ನ ಮನದಲ್ಲಿ ಹಚ್ಚ ಹಸಿರಾಗಿದೆ, ನಮ್ಮ ನಿತ್ಯ ಹರಿದ್ವರ್ಣದ ಕಾಡುಗಳ ಹಾಗೆ.



ಪ್ರಕಾಶ್ ಹೊನ್ನಕೋರೆ



# ಜಗತ್ತಿನ ಅತ್ಯುತ್ತಮ ನಿಸರ್ಗ ಪ್ರೇಮಿಗಳು

ಇತಿಹಾಸ: 20ನೇ ದಶಕದ ಆರಂಭದಲ್ಲಿ ಜರ್ಮನಿಯ ಅಲಂಕಾರಿಕ ಹಾವಿನ ಚರ್ಮದ ವ್ಯಾಪಾರಿ ಭಾರತಕ್ಕೆ ಬಂದ. ಅವನಿಗೆ ಚೆಂಗಲ್ಪಟ್ಟು ಬಳಿಯ "ಇರುಳ" ಬುಡಕಟ್ಟಿಗೆ ಸೇರಿದ ಆದಿವಾಸಿಗಳ ಬೇಟೆಯ ಚಾಕಚಕ್ಯತೆ ಬಗ್ಗೆ ಹೇಗೆ ತಿಳಿಯಿತೊ ನಮಗೆ ತಿಳಿಯದು, ವ್ಯಾಪಾರಿಯ ಪ್ರೇರಣೆಯಿಂದ ಇರುಳರು ಜಗತ್ತು ಕಂಡಿರುವ ಭಾರೀ ಹಾವುಗಳ ಮಾರಣ ಹೋಮವನ್ನು ಮಾಡಿದರು. ಮಧ್ಯವರ್ತಿಗಳ ಮುಖಾಂತರ ಜರ್ಮನರು ಆರಂಭಿಸಿದ ಈ ಉದ್ಯಮ ದೊಡ್ಡದಾಗಿ ಬೆಳೆದು ಹತ್ತು ಮಿಲಿಯನ್ ಗಿಂತಲೂ ಹೆಚ್ಚು ಹಾವುಗಳ ಮಾರಣ ಹೋಮವಾಯಿತು (ಪೌರಾಣಿಕ ಪಾತ್ರದ ಜನುಮಜೇಯನ ಸರ್ಪಯಾಗವನ್ನು ಮೀರಿಸುವಂತೆ). ಮೊದಲು ಇರುಳರಿಂದ ಆರಂಭವಾದ ಹಾವುಗಳ ಬೇಟೆ ದೇಶದಲ್ಲಿರುವ ಎಲ್ಲಾ ಬುಡಕಟ್ಟು ಜನರಿಗೂ ಹಬ್ಬಿತು ಆದರೆ ಯಾರೂ ಇರುಳರಷ್ಟು ಚಾಕಚಕ್ಯರಾಗಿರಲಿಲ್ಲ.

ಈ ದಂಧೆ ಹೆಚ್ಚು ಕಾಲ ನಿಲ್ಲಲಿಲ್ಲ. ಅಂತರರಾಷ್ಟ್ರೀಯ ಹಾಗೂ ಪ್ರಾದೇಶಿಕ ಸಮುದಾಯದ ಒತ್ತಡದಿಂದ ಹಾವಿನ ಚರ್ಮದ ದಂಧೆ 70ರ ದಶಕದಲ್ಲಿ ಇಳಿಮುಖವಾಯಿತು. 1976ರಲ್ಲಿ ಹಾವಿನ ಚರ್ಮದ ರಫ್ತಿನ ಮೇಲೆ ನಿಷೇಧ ಹೇರಿದ ಮೇಲೆ ಸುಮಾರು ಐದು ಸಾವಿರದಷ್ಟು ಇರುಳಿಗರಿಗೆ ಕೆಲಸವಿಲ್ಲದಂತಾಗಿ ಅವರ ಜೀವನ ಕಷ್ಟಕ್ಕೀಡಾಯಿತು. 1978ರಲ್ಲಿ ಈ ಕೃತಿಯ ಬರಹಗಾರರು (ರೋಮುಲಸ್ ವಿಟಾಕರ್, ಜಾನಕಿ ಲೆನಿನ್), ಅವರಸಮ ಮನಸ್ಕ ಸ್ನೇಹಿತರು ಹಾಗು ಇರುಳರು ಸೇರಿಕೊಂಡು ಇರುಳಿಗರ “ಸಹಕಾರ ಸಂಘ ನಿಗಮ” ಸ್ಥಾಪಿಸಿದರು, ಅವರು ಹಾವುಗಳನ್ನು ಹಿಡಿಯುತ್ತಾರೆ ಆದರೆ ಚರ್ಮಕ್ಕಲ್ಲ ಔಷಧಕ್ಕೆ ಬೇಕಾದ ವಿಷಕ್ಕಾಗಿ ಎಂದು ಬದಲಾಯಿಸಿದರು.

**ಇರುಳರು ಹೇಗೆ ಕಾರ್ಯ ನಿರ್ವಹಿಸುತ್ತಾರೆ**

1969 ರಲ್ಲಿ ಹಾವಿನ ಪ್ರತ್ಯೌಷಧ ತಯಾರಿಕಾ ಸಂಸ್ಥೆಯಾದ ಹಫ್ಕಿನ್ ಸಂಸ್ಥೆಗಾಗಿ ಹಾವುಗಳನ್ನು ಸಂಗ್ರಹಿಸುವಾಗ ನಾನು ಇರುಳರನ್ನು ಭೇಟಿಯಾದೆ. ದಿ.ಹ್ಯಾರಿ ಮಿಲ್ಲರ್ ರವರು ಇಂಡಿಯನ್ ಎಕ್ಸ್ ಪ್ರೆಸ್ ನಲ್ಲಿ ಇರುಳರ ಹಾವು ಹಿಡಿಯುವ ನೈಪುಣ್ಯತೆಯನ್ನು ಕುರಿತು ಬರೆದಿದ್ದರು. ಹಾಗೂ ನನಗೆ ಅರ್ಜುನ ಎಂಬ ಇರುಳನನ್ನು ಪರಿಚಯಿಸಿದರು. ಅವನ ನೈಪುಣ್ಯತೆಗೆ ನಾನು ಮಾರುಹೋದೆ. ಇರುಳರ ಶಾಂತ ಸ್ವಭಾವ ನನಗೆ ಬಹಳ ಇಷ್ಟವಾಯಿತು. ಹಾವುಗಳ ಬಗ್ಗೆ ಅವರಿಗಿರುವ ಜ್ಞಾನವನ್ನು 40 ವರ್ಷಗಳ ಒಡನಾಟದಲ್ಲಿ ನನಗೆ ಕಲಿಸಿದರು

ಅವರೊಡನೆ ನಾನು ಮೊದಲು ಕಲಿತದ್ದು ಹರಟೆಮಲ್ಲ, ಮೈನ, ಹಾಗು ಅಳಿಲುಗಳು ಹಾವನ್ನು ಕಂಡಾಗ ನೀಡುವ ಎಚ್ಚರಿಕೆಯ ಸಂದೇಶವನ್ನು ಗುರುತಿಸುವುದು. ಮಳೆ ಬಂದು ಪೊದೆಗಳು ದಟ್ಟವಾಗಿ ಬೆಳೆದಿರುವಾಗ ಹಾವುಗಳ ಇರುವನ್ನು ಗುರುತಿಸಲು ಹಕ್ಕಿಗಳ ಎಚ್ಚರಿಕೆ ಘಂಟೆ ಬಹಳ ಸಹಾಯಕಾರಿಯಾಗುತ್ತದೆ.


ಇರುಳ ಬುಡಕಟ್ಟಿನ ಪ್ರಖ್ಯಾತ ಚೊಕ್ಕಲಿಂಗಮ್

ಸಣ್ಣ ಜೇನು ಹುಳುಗಳು ಹೂವಿನಿಂದ ಸಂಗ್ರಹಿಸುವ ಜೇನನ್ನು ಬಿದಿರುಮೆಳೆಯಿಂದ ಹೇಗೆ ತೆಗೆಯುವುದು, ನಾಲಿಗೆ ತುಟಿಗಳಿಗೆ ಹತ್ತದಹಾಗೆ ಗೆದ್ದಲನ್ನು ಹೇಗೆ ತಿನ್ನುವುದು ಎಂದು ಕಲಿತೆ. ನಂತರ ಹಾವು ಸರಿದು ಹೋಗಿರುವ ಗುರುತಿನಿಂದ ಹಾವನ್ನು ಹೇಗೆ ಪತ್ತೆ ಹಚ್ಚುವುದು ಎನ್ನುವುದನ್ನು ಕಲಿಸಲು ಪ್ರಯತ್ನಿಸಿದರು. ದಶಕಗಳು ಕಳೆದರೂ ನಾನಿನ್ನೂ ಕಲಿಕೆಯ ಹಂತದಲ್ಲೇ ಇರುವೆ. ಸುಡು ಬಿಸಿಲಿರುವ ಭಾರತದಲ್ಲಿ ಹಾವುಗಳು ಬಿಲಗಳಲ್ಲಿ ಇಲಿಗಳನ್ನು ಹಿಡಿದು ತಿಂದು ಬದುಕುತ್ತವೆ ಅಥವಾ ಮರದ ಕೊಂಬೆಗಳಿಗೆ ಸುತ್ತಿಕೊಂಡಿರುತ್ತವೆ. ಇರುಳರು ಇಲಿಬಿಲ, ಹುತ್ತ ಪೊಟರೆಗಳ ಇರುವನ್ನು ಪತ್ತೆಮಾಡುವುದರಲ್ಲಿ ನಿಷ್ಣಾತರು.

**ಹಾವನ್ನು ಹಿಡಿದ ಕತೆ**

ಕಳೆದ ಜುಲೈ ನಲ್ಲಿ ನಾನು ಹಾಗು ನನ್ನ ಹೆಂಡತಿ ಜಾನಕಿ ಕಾಳಿಯೊಡನೆ ಹಾವು ಹಿಡಿಯಲು ಹೋಗಿದ್ದೆವು. ಕಾಳಿ ನನ್ನ ಇರುಳ ಮಿತ್ರ ಚೊಕ್ಕಲಿಂಗಮ್ ನ ಪುತ್ರ. ಅವನು ನಾಗರಹಾವು ಕಟ್ಟಾವು, ಕೊಳಕಮಂಡಲ ಹಾವುಗಳನ್ನು ವಿಷ ಸಂಗ್ರಹಣೆಗಾಗಿ ಹಿಡಿಯುತ್ತಿದ್ದ.

ನಾವು ನಾಗರಹಾವನ್ನು ಹಿಡಿಯುವ ಎಂದು ಭತ್ತದ ಗದ್ದೆಗಳಕಡೆ ಹೋದೆವು. ಅಲ್ಲಿ ಯಥೇಚ್ಛವಾಗಿ ಇಲಿ ಹೆಗ್ಗಣಗಳ ಬಿಲಗಳಿದ್ದವು. ಬಿಲಗಳ ಬಳಿ ಅಲ್ಲಲ್ಲಿ ಹೆಗ್ಗಣ ಅಥವಾ ಏಡಿಯ ಗುರುತುಗಳಿದ್ದವು. ಕೆಲವೆಡೆ ಆಗತಾನೆ ಕೊರೆದ ಬಿಲಗಳಿದ್ದವು. ಕಾಳಿ ಸ್ವಲ್ಪ ನುಣುಪಾಗಿ ಮಣ್ಣು ಒತ್ತಿದ ಹಾಗೆ ಆಗಿ ಹೊಳೆಯುತ್ತಿದ್ದ ಒಂದು ಬಿಲದ ಮುಂದೆ ನಿಂತ. ಅದರೊಳಗೆ ಕೈಯಲ್ಲಿರುವ ಕೊಕ್ಕೆಯನ್ನು ಹಾಕಿ ತಿವಿದು ಸ್ವಲ್ಪ ಮಣ್ಣನ್ನು ಉದಿರಿಸಿದ. ಬಿಲ ತೆರೆದುಕೊಂಡಿತು. ಬಿಲದೊಳಗಡೆ ಹಾವು ಹರಿದಾಡಿರುವ ಗುರುತನ್ನು ನಮಗೆ ತೋರಿಸಿದ. ಬಿಲವನ್ನು ಅಗಲವಾಗಿ ತೋಡುವುದನ್ನು ತಡೆಯಲು ಅಲ್ಯಾವ ಮರದ ಬೇರೂ ಇರದ ಕಾರಣ ಅಗಲವಾದ ಹೊಂಡವನ್ನು ಶೀಘ್ರವಾಗಿ ಜಾಗರೂಕವಾಗಿ ತೆಗೆದನು. ಸ್ವಲ್ಪ ಅಗೆದ ಮೇಲೆ ಕಾಳಿ ಒಂದು ಸಣ್ಣ ಕಡ್ಡಿಯನ್ನು ತೆಗೆದುಕೊಂಡು ಬಿಲದೊಳಗೆ ತೂರಿಸಿದ. ಸುಮಾರು ಒಂದು ಅಡಿ ಒಳ ಹೋದಾಗ ಅತ್ತಕಡೆಯಿಂದ ಯಾರೋ ತಳ್ಳಿದಂತಾಗಿ ಕಡ್ಡಿ ಒಂದಿಂಚು ಆಚೆ ಬಂದಿತು. ಅದನ್ನು ನೋಡಿ ನಕ್ಕ ಕಾಳಿ ಹಾವಿಗೆ ತೊಂದರೆಯಾಗದಂತೆ ಇನ್ನೊಂದಡಿ ಮಣ್ಣನ್ನು ತೆಗೆಯಬಹುದೆಂದು ತೋಡುವುದನ್ನು ಮುಂದುವರೆಸಿದ, ಸ್ವಲ್ಪ ಸಮಯದಲ್ಲೇ ಹಾವು ಹಾಗು ಅದರ 20 ಮೊಟ್ಟೆಗಳು ನಮಗೆ ಕಂಡವು. ಹುಷಾರಾಗಿ ನಾಗರಹಾವನ್ನು ಹಿಡಿದು ಚೀಲಕ್ಕೆ ಹಾಕಿಕೊಂಡ ಹಾಗು ಮೊಟ್ಟೆಗಳನ್ನು ಇರುಳರ ಕೇಂದ್ರದಲ್ಲಿ ಮರಿಮಾಡಲು ಹೆಕ್ಕಿಕೊಂಡ.




ನಾವಿದ್ದ ಮುಂದಿನ ಕೆಲದಿನಗಳಲ್ಲಿ ಇರುಳ ಮಿತ್ರರು ನಮ್ಮನ್ನು ಕೊಳಕು ಮಂಡಲ ಹೆಚ್ಚಾಗಿರುವ ಸ್ಥಳಕ್ಕೆ ಕರೆದುಕೊಂಡು ಹೋದರು. ಅಲ್ಲಿದ್ದ ಪೊದೆಗಳಿಂದ ಎರಡು ದೊಡ್ಡ ಕೊಳಕು ಮಂಡಲದ ಹಾವುಗಳು ಹಾಗು ಅರು ಮರಿ ಹಿಡಿದೆವು. ಮರಿ ಹಾವುಗಳನ್ನು ಸುರಕ್ಷಿತ ಪ್ರದೇಶದಲ್ಲಿ ಬಿಟ್ಟೆವು. ನಂತರ

ಕಟ್ಟುಹಾವುಗಳನ್ನು ಹಿಡಿಯಲು ಮುಂದಾದೆವು. ಈ ಬಾರಿ ನಮಗೆ ಹಾವು ಪತ್ತೆಮಾಡಲು ಸಹಾಯವಾಗಿದ್ದು ಹಾವಿನ ಪೊರೆ ಹಾಗು ಅವು ಹರಿದುಹೋಗಿರುವ ಗುರುತುಗಳು. ನಿಶಾಚರಿಯಾದ ಈ ಹಾವನ್ನು ಪತ್ತೆಮಾಡಿ ಹಿಡಿಯುವುದು ಕಷ್ಟ. ನಾವು ಬೆನ್ನತ್ತಿದ ಗಂಡು ಹಾವು ಬೇವಿನಮರದ ಬೇರುಗಳ ನಡುವೆ ಪೊಟರೆಯಲ್ಲಿ ಅವಿತಿತ್ತು. ಇರುಳರಿಗೆ ಇವೆಲ್ಲ ತೊಂದರೆ ಎಂದೇ ಅನಿಸುವುದಿಲ್ಲ..ಈ ವಿಷಕಾರಿ ಹಾವುಗಳನ್ನು ಕ್ಷಣಮಾತ್ರದಲ್ಲೇ ಹಿಡಿದು ಬುಟ್ಟಿಗೆ ಹಾಕಿಕೊಂಡರು. ಬೆಳಗಿನ ಸಮಯದಲ್ಲಿ ಅರಳಿಮರದ ಬಳಿ ಸುರುಳಿಸುರುಳಿಯಾಗಿ ಸುತ್ತಿಕೊಂಡಿರುವ ಸಣ್ಣ ತೀಕ್ಷ್ಣ ವಿಷಕಾರಿಯಾದ ಕೊಳಕುಮಂಡಲಹಾವುಗಳನ್ನು ಕಂಡೆವು! ಇರುಳರಿಗೆ ಎಲ್ಲಿ ಯಾವಾಗ ಯಾವ ಹಾವನ್ನು ನೋಡಬಹುದೆಂಬುದು ರಕ್ತಗತವಾಗಿರುವ ಕಲೆ!

ನನ್ನಮಗ ನಿಖಿಲ್ ನೊಂದಿಗೆ ವೈಜ್ಞಾನಿಕ ಲೇಖನಕ್ಕಾಗಿ ಐದು ದಿನ ಹಾವುಗಳ ಬಗ್ಗೆ ಮಾಹಿತಿಕಲೆಹಾಕುವಾಗ ದಿನಕ್ಕೆ ಸುಮಾರು ಮೂರು ಕಿಲೋಮೀಟರ್ ನಷ್ಟು ದೂರವನ್ನು ಕ್ರಮಿಸಿ ಅಂದಾಜು 55 ಬಗೆಯ  ವಿಷಕಾರಿ ಹಾಗು ವಿಷಕಾರಿಯಲ್ಲದ ಹಾವುಗಳನ್ನು (ಕೇರೆಹಾವು ,ನೀರುಹಾವುಪಟ್ಟೆ ಬೆನ್ನೇಣುಹಾವು (ಸ್ಟ್ರೈಪ್ಡ್ ಕೀಲ್ ಬ್ಯಾಕ್, ಮರಳು ಹಾವು) ಹಿಡಿದು ಅವುಗಳ ಉದ್ದವನ್ನು ಅಳತೆಮಾಡಿ ಬಿಟ್ಟುಬಿಟ್ಟೆವು. ಹನ್ನೊಂದು ಜಾತಿ ಹಾವುಗಳ 158 ಪೊರೆಗಳನ್ನು ಕೂಡಾ ಸಂಗ್ರಹಿಸಿದೆವು. ಪೊರೆಗಳು ಹಾವುಗಳ ಸಂಖ್ಯೆ, ಆರೋಗ್ಯ ಹಾಗು ಯಾವ ಜಾತಿಯ ಹಾವೆಂದು ಗುರುತಿಸುವುದಕ್ಕೆ ಸಹಾಯ ಮಾಡುತ್ತವೆ.




ಇರುಳರ ಕಲಾನೈಪುಣ್ಯ ಹಾವುಗಳನ್ನು ಪತ್ತೆಮಾಡುವುದಕ್ಕೆ ಸೀಮಿತವಾಗಿಲ್ಲ. ಹೊಲಗದ್ದೆಗಳಲ್ಲಿ ವಿಪರೀತವಾಗಿ ಕಾಟಕೊಡುವ ಇಲಿಗಳನ್ನು ಅವರು ತಿನ್ನುತ್ತಾರೆ. ಇಲಿಗಳನ್ನು ಪತ್ತೆಮಾಡಿ ಹಿಡಿಯುವ ಅವರ ವೈಖರಿ ಬೆಕ್ಕುಗಳನ್ನೂ ನಾಚಿಸುತ್ತದೆ. ಅವರು ಖಾಲಿ ಬಿಲಗಳನ್ನು ತೋಡಿ ಸಮಯವ್ಯರ್ಥಮಾಡುವುದಿಲ್ಲ. ಬಿಲಗಳ ಬಳಿ ಇಲಿಗಳು ಓಡಾಡಿ ಮಾಡಿರುವ ಹೊಸ ಗುರುತುಗಳು, ಅವುಗಳ ಹಿಕ್ಕೆ, ಇಲಿ ಚಿಗಟೆಯ ಸಹಾಯದಿಂದ ಇಲಿಗಳ ಇರುವನ್ನು ಖಚಿತಪಡಿಸಿಕೊಳ್ಳುತ್ತಾರೆ. ಅವರ ನೈಪುಣ್ಯತೆಯನ್ನು ಕಂಡ ಭಾರತ ಸರ್ಕಾರ ವಿಜ್ಞಾನ ಹಾಗು ತಂತ್ರಜ್ಞಾನ ಇಲಾಖೆಯಿಂದ ಇರುಳರ ಸಂಘಕ್ಕೆ 10 ಲಕ್ಷ ಹಣನೀಡಿ

ಬೆಳೆ ರಕ್ಷಣೆಗಾಗಿ ನೇರವಾಗಿ ಇಲಿ ಹಿಡಿಯುವುದರ ಪರಿಣಾಮದ ಬಗ್ಗೆ ಅಧ್ಯಯನ ನಡೆಸಿತು. ಇಪ್ಪತ್ತು ತಿಂಗಳ ಕಾಲದಲ್ಲಿ ಒಂದು ಹನಿ ವಿಷ ಬಳಸದೆ ಇರುಳರು 400,0000 ಇಲಿಗಳನ್ನು ಹಿಡಿದು ಸುಮಾರು 12 ಟನ್ ಆಹಾರ ಧಾನ್ಯವನ್ನು ಇಲಿಗಳಿಂದ ರಕ್ಷಿಸಿದರು. ಆದರೆ ಭಾರತ ಸರ್ಕಾರ ಈಕ್ರಿಯಾಯೋಜನೆಯ ಕಾರ್ಯರೂಪಕ್ಕೆ ಅಂತಿಮ ತೀರ್ಮಾನವನ್ನು ತೆಗೆದುಕೊಳ್ಳಲೇ ಇಲ್ಲ. ಜೈವಿಕ ಇಲಿನಿಯಂತ್ರಣದ ತಲೆಬರಹದಡಿ ಈ ಕಾರ್ಯಯೋಜನೆಯನ್ನು ಕ್ರಿಯಾ ರೂಪಕ್ಕೆ ತಂದಿದ್ದರೆ ಲಕ್ಷಾಂತರ ಬುಡಕಟ್ಟು ಜನರಿಗೆ ಉದ್ಯೋಗವಾಗುತ್ತಿತ್ತು. ಇಲ್ಲೂ ಕೂಡ ದೊಡ್ಡ ರಾಸಾಯನಿಕ ಕಾರ್ಖಾನೆಯವರ ಕೈವಾಡವಿರುವುದು ಖೇದಕರ ಸಂಗತಿ ..ಇಲಿಪಾಷಾಣ ಎಷ್ಟು ಅಪಾಯಕಾರಿಯಾಗಿದ್ದರೇನು ಬಹುಮೊತ್ತದ ಹಣದ ಮುಂದೆ ವಿಷವೂ ಸಿಹಿಯಾಗುತ್ತದೆ!

ದೇಶದಲ್ಲಿ ಆರ್ಥಿಕವಾಗಿ ಲಾಭಗಳಿಸುತ್ತಿರುವ ಕೆಲವೇ ಸಹಕಾರಿ ಸಂಘಗಳಲ್ಲಿ ಇರುಳರ ಸಂಘ ಕೂಡ ಒಂದು. ಅವರಲ್ಲಿರುವ ಪ್ರತಿಭೆಯ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಬೇಕು. ಇಲಿ ನಿಯಂತ್ರಣ, ಮೊಸಳೆ ಅಭಿವೃದ್ಧಿ ತಾಂತ್ರಿಕ ಸಹಾಯ ಇವೆಲ್ಲ ಇರುಳರ ಒಂದು ಮುಖವಷ್ಟೆ. Irula Tribal Women's Welfare Society ಇರುಳರ ಇನ್ನೊಂದು ಅಂಗಸಂಸ್ಥೆ, ಇರುಳ ಹೆಣ್ಣು ಮಕ್ಕಳು ಗಿಡ ಮರಗಳನ್ನು ನೆಟ್ಟು ಬೆಳೆಸುವುದರಲ್ಲಿ ನಿಷ್ಣಾತರು. 1986 ರಿಂದ ಇವರು ಲಕ್ಷಕ್ಕೂ ಮೀರಿ ಗಿಡಗಳನ್ನು ನೆಟ್ಟು ಬೆಳೆಸಿದ್ದಾರೆ. ಪಠ್ಯ ಪುಸ್ತಕಗಳಲ್ಲಿ ಭಾರತದೇಶದ ಅತೀಪ್ರಾಚೀನ ಕಡಿಮೆ ಹಣ ಸಂಪಾದಿಸುವ ಬುಡಕಟ್ಟು ಎಂದು ಗುರುತಿಸುವ ಇರುಳರ ಭವಿಷ್ಯ ಉಜ್ವಲವಾಗಿದೆ.




ಇರುಳರಲ್ಲಿ ಸಾಕ್ಷರತೆ ಪ್ರಮಾಣ ಕಡಿಮೆ ಹೌದು, **ಆದರೆ** ಅವರ ಪ್ರಕೃತಿಯ ಜ್ಞಾನ ವಿಶ್ವವಿದ್ಯಾಲಯದ ಪ್ರೊಫೆಸರ್ ಗಳ ಜ್ಞಾನಕ್ಕಿಂತಲೂ ಹೆಚ್ಚಾಗಿದೆ. ಇದು ನಾವು ಯೋಚಿಸಲೇಬೇಕಾದ ಸಂಗತಿ.

**ಮೂಲ ಲೇಖನ : ರೋಮುಲುಸ್ ವಿಟೇಕರ್**

**ಜಾನಕಿ ಲೆನಿನ್**

**ಕನ್ನಡಕ್ಕೆ ಅನುವಾದ: ಡಾ. ದೀಪಕ್ .ಬಿ**



## ವಿ. ವಿ. ಅಂಕಣ

# ಫಂಗಸ್ ಕೊಲ್ಲುವ ಬ್ಯಾಕ್ಟೀರಿಯಾ!

ಕೆಮ್ಮಿಗೆ ನಿದ್ದೆ ಬಾರದ ಮೊದಲ ದಿನ ಅದು. ಆಗೊಮ್ಮೆ ಈಗೊಮ್ಮೆ ಕೆಮ್ಮು ಬಂದರೆ ಸಹಿಸಬಹುದು. ಆದರೆ ಎದೆಯೊಳಗಿಂದ ಶುರುವಾಗುವ ಕೆಮ್ಮಿನ ಉಗಿಬಂಡಿಯ ಇಂಜಿನ್, ಒಂದಾದ ಮೇಲೊಂದು ಬೋಗಿಗಳಂತೆ ಹಿಂದಿಂದೆಯೇ ಬಂದರೆ-ತೊಂದರೆ. ಇವುಗಳು ಸಾಲದೆಂಬಂತೆ ನೆಗಡಿ ಬೇರೆ. ಅಷ್ಟು ಸುಲಭವಾಗಿ ಬಾರದ ಕೆಮ್ಮು ನೆಗಡಿ ಮನೆಗೆ ಬರುವ ದೂರಸಂಬಂಧಿಗಳಂತೆ ಈಗ ಬಂದಿದೆಯೆಂದರೆ, ಅಷ್ಟು ಸುಲಭವಾಗಿ ಹೋಗದು. ಆದರೆ ಈ ಬಾರಿ ಬಂದಿರುವ ಕೆಮ್ಮು ನೆಗಡಿಗಳು ಸುಮಾರು ದಿನಗಳು ಇರುವಿಕೆಯ ಬಗ್ಗೆ ನನ್ನದು ಬೇರೆ ಸಿದ್ಧಾಂತವಿದೆ. ನನ್ನ ಗಟ್ಟಿ ನಂಬಿಕೆ ಏನೆಂದರೆ ಈಗ ನಾನಿರುವ ಆಶ್ರಮ-ತೋಟದ ರೂಮಿನಲ್ಲಿ(ಈಗ ಕಡಿಮೆಯಾಗಿದೆಯಾದರೂ) ಖಾಯಂ ಆಗಿ ನೆಲೆಸಿರುವ ಫಂಗಸ್ ನಿಂದಲೇ ನನ್ನ ಕೆಮ್ಮಿನ ತೀಕ್ಷ್ಣತೆ ಮತ್ತು ನೆಗಡಿಯ ಆರ್ಭಟಗಳು ಹೆಚ್ಚುತ್ತಿವೆ ಎಂದು. ಇದನ್ನೇ ವಿವರಿಸಲೆಂದು ಮುರುಳಿ ಅಣ್ಣನನ್ನು ಕರೆತಂದು ಅವುಗಳ(ಫಂಗಸ್) ಚೇಷ್ಟೆಯನ್ನು  ವಿವರಿಸಿದರೆ, ಈಗತಾನೇ ನವೀಕರಿಸಿದ ತನ್ನ ರೂಮಿನ ಮೇಲಿನ ಆಪಾದನೆಯನ್ನು ಅವನು ಸಹಿಸದೆಯೋ ಏನೋ ಒಮ್ಮೆ ಪರೀಕ್ಷಿಸಿ, ಇಲ್ಲ! ಈಗ ಇಲ್ಲಿ ಆ ತರಹದ ಯಾವುದೇ ಫಂಗಸ್ ಇಲ್ಲ ಎಂದು(ಹಳೆಯ ರೂಮಿನ ಅವಸ್ಥೆಯನ್ನು ನೆನಪಿಸಿಕೊಂಡು) ಹೇಳಿಬಿಟ್ಟ ಎನಿಸುತ್ತದೆ. ಆದರೂ ಇಂತಹ ಜುಜುಬಿ ಖಾಯಿಲೆಗಳಿಗೆ ಅಷ್ಟು ಸುಲಭವಾಗಿ ಗುಳಿಗೆಗಳ ಮೊರೆ ಹೋಗದ ನಾನು, ಈ ಬಾರಿ ಒಂದೆರೆಡು ಬಾರಿ ವಿಶೇಷ ಗುಳಿಗೆಗಳನ್ನು ಸೇವಿಸಿದರೂ ಇವುಗಳು ಕಾಲ್ಕೀಳಲಿಲ್ಲ. ಹಾಗಾದರೆ ಆ ಫಂಗಸ್ಸೇ ಇದಕ್ಕೆ ಕಾರಣವೆಂಬುದು ಈಗಲೂ ನನ್ನ ಗುಮಾನಿ.

ಫಂಗಸ್ ಎಂಬುದು ಕೆಲವು ಬಾರಿ ನಮಗೆ ಉಪಯೋಗಕರವಾಗಿದ್ದರೂ, ಇನ್ನು ಕೆಲವು ಬಾರಿ ತೊಂದರೆಕಾರಕವಾಗಿರುತ್ತವೆ. ಉದಾಹರಣೆಗೆ ನಾವು ತಿನ್ನುವ ಕೆಲವು ಜಾತಿಯ ಅಣಬೆಗಳು. ಅವುಗಳಿಂದ ಹರಡುವ ಕೆಲ ಚರ್ಮದ ತುರಿಕೆಗಳು ಇತ್ಯಾದಿ. ಹೀಗೆ ಫಂಗಸ್ ಗಳು ಕೇವಲ ಮಾನವರಿಗಲ್ಲದೆ ಕೆಲವು ಜೀವಿಗಳಿಗೂ ಉಪದ್ರವ ಕೊಡುವ ಉದಾಹರಣೆಗಳಿವೆ. ಅವುಗಳಲ್ಲೊಂದೇ ಈ ಬಾರಿಯ ವಿ ವಿ ಅಂಕಣದ ವಿಷಯ.

ಬಾಕ್ಟೀರಿಯಾ ಎಂದರೆ ಮೊದಲಿಗೆ ಸಾಮಾನ್ಯವಾಗಿ ನಮ್ಮ ತಲೆಯಲ್ಲಿ ಹೊಳೆಯುವುದು ತೊಂದರೆ ಎಂದೇ ಅಲ್ಲವೇ. ಉದಾಹರಣೆಗೆ ಕೆಲವು ಬಾರಿ ಕೆಟ್ಟುಹೋದ ಮೊಟ್ಟೆಯನ್ನು ಗಮನಿಸಿದರೆ, ಅಲ್ಪ ಸ್ವಲ್ಪ ತಿಳಿದ

ನನ್ನಂತವರು ಬಾಕ್ಟೀರಿಯಾವೇ ಇದಕ್ಕೆ ಕಾರಣ ಎಂದು ದೂಷಿಸುತ್ತಾರೆ. ಆದರೆ ಇಲ್ಲಿ ಒಂದು ಬಗೆಯ ಬಾಕ್ಟೀರಿಯಾ ಇನ್ನೊಂದು ಜೀವಿಯ ಮೊಟ್ಟೆಗಳನ್ನು ಕಾಪಾಡಿ ಆ ಜೀವಿಯ ಪೀಳಿಗೆಗೆ ಆಶಾಕಿರಣವಾಗಿದೆ ಎಂದರೆ ನನ್ನಂತವರಿಗೆ ಜೀರ್ಣಿಸಿಕೊಳ್ಳಲು ಸ್ವಲ್ಪ ಕಷ್ಟವಾದೀತು. ಆದರೆ ಇದೇ ಸತ್ಯವೆಂದು ಮುಂದಿನ ಓದಿನಲ್ಲಿ ಅರಿಯಬಹುದು.



*ಎಷ್ಟೋ ಬಾರಿ ಮೀನಿನ ಮೊಟ್ಟೆಗಳಿಗೆ ಇನ್ನೊಂದು ಮೀನೋ, ಕೀಟವೋ ಅಥವಾ ಇನ್ನಾವುದೋ ಪ್ರಾಣಿಯೋ ಕಂಟಕವಾಗಿರಬಹುದು.* ಮೊಲ್ಲಸ್ಕನ್ ಗುಂಪಿಗೆ ಸೇರಿದ *ಬಾಬ್ ಟೇಲ್ ಸ್ಕಿಡ್* (*Euprymna scolopes)* ಎಂಬ ಜಾತಿಯ ಮೀನಿನ ಮೊಟ್ಟೆಗಳ ಸುರಕ್ಷತೆಗೆ *ಫ್ಯುಸೇರಿಯಮ್ (Fusarium keratoplasticum) ಎಂಬ* ಫಂಗಸ್ ಸವಾಲೊಡ್ಡುತ್ತಿದೆ ಎಂಬುದು ವಾಸ್ತವ. ಇದಕ್ಕೆ ವಿರುದ್ಧವಾಗಿ ಈ ಸ್ಕಿಡ್ ಉಪಯೋಗಿಸಿದ ಆಯುಧವೇ *ರೋಡೋ ಬಾಕ್ಟೀರಿಯಾ* (*Rhodobacteraceae).*

ಫಂಗಸ್ ನ ಉಪದ್ರವದಿಂದ ತಪ್ಪಿಸಿಕೊಳ್ಳಲು *ಬಾಬ್ ಟೇಲ್ ಸ್ಕಿಡ್* , ಬಾಕ್ಟೀರಿಯಾ ಮೊರೆ ಹೋಗಿದೆ. ಅದರ ಆಕ್ಸೆಸ್ಸರಿ ನಿಡಮೆಂಟಲ್ (accessory nidamental gland) ಎಂಬ ಗ್ರಂಥಿಯು ಎರಡು ಬಗೆಯ ಬಾಕ್ಟೀರಿಯಾಗಳಿಗೆ ಮನೆಯಾಗಿದೆ. ಇವುಗಳನ್ನು ಬಾಬ್ ಟೇಲ್ ಸ್ಕಿಡ್ಗಳು ಸುತ್ತಲೂ ಲೇಪಿಸಿರುವ ಮೊಟ್ಟೆಯನ್ನು ಇಡುತ್ತವೆ. ಇದರಿಂದ ತನ್ನ ಮೊಟ್ಟೆಗಳ ಸುರಕ್ಷತೆಯನ್ನು ಕಾಪಾಡಿಕೊಳ್ಳುತ್ತವೆ ಎನ್ನುತ್ತಾರೆ ಕನ್ನೆಕ್ಟಿಕಟ್ ವಿಶ್ವ ವಿದ್ಯಾಲಯದ ನೈಹೋಮ್.

ಹಾಗಾದರೆ *ಫ್ಯುಸೇರಿಯಮ್* ಫಂಗಸ್ ಗಳೇ ಮೊಟ್ಟೆಗಳನ್ನು ಕೆಡುವಂತೆ ಮಾಡುತ್ತಿವೆ ಹಾಗೂ *ರೋಡೋ* ಬಾಕ್ಟೀರಿಯಾಗಳೇ ಈ ಮೊಟ್ಟೆಯನ್ನು ಕಾಪಾಡುತ್ತಿರುವುದು ಎಂಬುದಕ್ಕೆ ಪುರಾವೆಯೇನು ಎಂದು ಕೇಳಬೇಕಾದದ್ದು ಪ್ರತಿಯೊಬ್ಬ ವೈಜ್ಞಾನಿಕ ಚಿಂತಕನ ಧರ್ಮ. ಇದನ್ನು ತಿಳಿಯಲೆಂದೇ ನೈಹೋಮ್ ರವರು ಬಾಕ್ಟೀರಿಯಾದಿಂದ ಲೇಪಿಸಿದ ಒಂದು ಮೊಟ್ಟೆಯನ್ನು ತೆಗೆದುಕೊಂಡು ಲೇಪನದಲ್ಲಿರುವ ಬಾಕ್ಟೀರಿಯಾವನ್ನು ಕೊಲ್ಲುವಂತಹ ಆಂಟೀ-ಬಯೊಟಿಕ್ ಒಂದನ್ನು ಪ್ರಯೋಗಿಸಿದರು. ಇದರ ಪರಿಣಾಮ ಅಲ್ಲಿನ ಬಾಕ್ಟೀರಿಯಾಗಳು ಸತ್ತುಹೋದವು. ಇದಾದ ಸ್ವಲ್ಪ ಸಮಯದಲ್ಲೇ ಸ್ಕಿಡ್ ನ ಮೊಟ್ಟೆಗಳು ಫಂಗಸ್ ನಿಂದ ಕೂಡಿದ ಮುದ್ದೆಯಾಗಿ, ಬಳಿಕ ಬೆಳೆಯುತ್ತಿದ್ದ ಮೀನಿನ ಭ್ರೂಣ ಸತ್ತು ಹೋಯಿತು. ಈ ಪ್ರಯೋಗದ ತಾತ್ಪರ್ಯ ಬಾಕ್ಟೀರಿಯಾಗಳು ಸ್ಕಿಡ್ ನ ಮೊಟ್ಟೆಗಳಿಗೆ ರಕ್ಷಾಕವಚದಂತೆ ಕೆಲಸ ಮಾಡುತ್ತಿದ್ದವು.

ಅಷ್ಟೇ ಅಲ್ಲದೆ ಸ್ಕಿಡ್ ನ ಈ ನಿಡಮೆಂಟಲ್ ಗ್ರಂಥಿಯಿಂದ ಒದಗುವ ಕೆಲವು ರಾಸಾಯನಿಕಗಳು ಕೆಲವು ಬೇರೆ ಬಗೆಯ ಬಾಕ್ಟೀರಿಯಾ ಮತ್ತು ಫಂಗಸ್ ಗಳಿಗೆ ರೋಧಕವಾಗಿವೆ. ಇದರಲ್ಲಿ ಮನುಷ್ಯರಿಗೆ ಸೋಂಕು ತರುವ *ಕ್ಯಾಂಡಿಡಾ (candida albicans)* ಎಂಬ ಫಂಗಸ್ ಗೂ ಸಹ ರೋಧಕವಾಗಿದ್ದು, ಮುಂದಿನ ದಿನಗಳಲ್ಲಿ ಈ ರಸಾಯನಿಕಗಳು ನಮ್ಮ ಕೆಲವು ಸೋಂಕುಗಳಿಗೆ ಸ್ವಾಭಾವಿಕ ಆ್ಯಂಟೀ-ಬಾಯಾಟಿಕ್ ಆಗಿ ಅಥವಾ ಫಂಗಸ್ ವಿರೋಧಕ ಮಾತ್ರೆಗಳಾಗಿಯೂ ಔಷಧಿ ಅಂಗಡಿಗಳಲ್ಲಿ ದೊರೆಯಬಹುದು ಎನ್ನುತ್ತಾರೆ ನೈಹೋಮ್.





**- ಜೈ ಕುಮಾರ್ .ಆರ್**

**WCG, ಬೆಂಗಳೂರು**

# ಚಿಟ್ಟೆ

ಚಿಟ್ಟೆ ..ಚಿಟ್ಟೆ
ಬಣ್ಣದ ಚಿಟ್ಟೆ..
ಬಿಟ್ಟೆ.. ಕೆಟ್ಟೆ..
ಹೂವಿನ ಪಟ್ಟೆ..

ರಂಗು ರಂಗಿನ
ಚಿತ್ತಾರ..
ಮುಂಗಾರಿಗೆ
ನೀ ಹುನ್ನಾರ.

ನಿನ್ನಯ ಬದುಕು
ಅಲ್ಪ ನಿನಾದ..
ನಿನ್ನಯ ನೋಟ
ಇಲ್ಲ ವಿಷಾದ.

ಚಿಟ್ಟೆ.. ಚಿಟ್ಟೆ..
ಏನೀ ಮಾಟ..
ನಲಿವಿನ ಹೊಳೆಯಲಿ
ನಮ್ಮಯ ತೋಟ.

ಹೂವಿನ ತಳಿರಲು
ನಿನ್ನಯ ಆಟ
ಸುಮದ ಸವಿಗೆ
ನಿನ್ನಯ ಓಟ.

ಜನ್ಮದ ಆದಿ
ನಿನ್ನಲಿ ಕೊಟ್ಟೆ
ರಂಗಿನ ಕಾವಿ
ಹುರುಪಲಿ ತೊಟ್ಟೆ.

ಮಕ್ಕಳ ಆಟಕೆ
ನೀ ಬದುಕಾದೆ..
ವಿಧಿಯ ಮೋಡಿಗೂ
ನೀ ಮಸಿಯಾದೆ..

ಕಿಲಕಿಲ ನಗುವಿಗೆ
ನಿನ್ನಯ ಪುಳಕ..
ನಿನ್ನಯ ಹಾದಿಯೇ
ಸುಂದರ ಜಳಕ.

ಸುಮದ ಒಲವಿಗೆ
ಪ್ರೇಮ ಪುರಾಣ..
ನಿನ್ನಯ ಸ್ಪರ್ಶವೇ
ಸುಮದ ತ್ರಾಣ.

ಮಿಂಚಿನ ಬದುಕಲು
ಹುರುಪಿನ ಮೋಡಿ..
ನಿನ್ನಯ ಕಾಣಲು
ತನ್ಮನ ಕೋಡಿ.

ಪತಂಗದೊಲುಮೆ
ಮುಂಗಾರಿನಲ್ಲೇ..
ನವ ಚೈತನ್ಯಕೆ
ನಿನ್ನದೆ ಪ್ರತಿಮೆ.


ನಂದಕುಮಾರ್ ಹೊಳ್ಳ.
ಸಾಸ್ತಾನ ಪಾಂಡೇಶ್ವರ.






ಚಿತ್ರಕಲೆ : ಮಮತ .ಆರ್

# ಪ್ರಕೃತಿ ಬಿಂಬ



**ಹಾಲಕ್ಕಿ** © ಪೃಥ್ವಿ.ಬಿ

ದಕ್ಷಿಣ ಏಷ್ಯಾದ ದೇಶಗಳಲ್ಲಿ ಕಂಡುಬರುವ ಗೂಬೆ ಜಾತಿಗೆ ಸೇರಿದ ಹಕ್ಕಿ ಈ ಹಾಲಕ್ಕಿ. ಸಂಜೆಯ ವೇಳೆ ಮರದ ಮೇಲೆ ಅಥವ ಪಾಳುಮನೆಯ ಸಂದುಗಳಲ್ಲಿ ಕುಳಿತು ಟುಕು ಟುಕು ಎಂದು ಕೂಗುತ್ತವೆ. ಸಾಮಾನ್ಯವಾಗಿ ನಾಲ್ಕೈದು ಹಾಲಕ್ಕಿಗಳು ಕುಟುಂಬ ಸಮೇತ ಕಾಣಸಿಗುತ್ತವೆ. ರಾತ್ರಿಯಿಡಿ ಕಿಚಿ ಕಿಚಿ ಎಂದು ಸಂಭಾಷಿಸುತ್ತಾ ಇರುತ್ತವೆ. ಹಳ್ಳಿಗಳ ಬಳಿ ರಾತ್ರಿವೇಳೆ ಚಿಕ್ಕ ಚಿಕ್ಕ ಇಲಿ ಕಪ್ಪೆಗಳನ್ನು ಹಿಡಿದು ತಿನ್ನುತ್ತವೆ. ಲೈಟುಕಂಬದ ದೀಪದ ಬೆಳಕಿಗೆ ಬರುವ ಉರುಗಗಳನ್ನು ಹಿಡಿದು ತಿನ್ನಲು ಕಂಬದ ತಂತಿಯ ಮೇಲೆ ಕುಳಿತಿರುವುದನ್ನು ಕಾಣಬಹುದು, ಮುಖದ ಮೇಲೆ ಉಬ್ಬಾದ ಹಳದಿ ಕಣ್ಣುಗಳು ಹೊಟ್ಟೆಯ ಮೇಲೆ ಬಿಳಿಚುಕ್ಕೆಗಳಿರುತ್ತವೆ. ದುಂಡನೆಯ ತಲೆ ತಿರುಗಿಸುತ್ತಾ ನೋಡುತ್ತಿರುತ್ತದೆ. ಮರದ ಪೊಟರೆಯಲ್ಲಿ ಗೂಡು ಮಾಡುತ್ತದೆ.



ಗೀಜಗ © ಪೃಥ್ವಿ.ಬಿ

ಕೆರೆಯ ಬಳಿ ನೀರು ಹರಿಯುವ ಹಳದಿ ಇಕ್ಕೆಲಗಳಲ್ಲಿ ನೀರಿನೆಡೆಗೆ ಬಾಗಿರುವ ಮರಗಳಲ್ಲಿ ಬಾವಿಯ ಬಳಿ ಬಿಟ್ಟಿರುವ ಮರದ ಕೊಂಬೆಗಳಲ್ಲಿ ಹುಲ್ಲಿನ ನಾರಿನಿಂದ ಮಾಡಿದ ಕಾಲು ಚೀಲದಾಕಾರದ ಗೂಡನ್ನು ನೀವು ನೋಡಿರುತ್ತೀರಿ. ಒಂದು ಮೊಳ ಉದ್ದದ ಈ ಗೂಡನ್ನು ಕಟ್ಟುವುದು ಗಂಡು. ಹೆಣ್ಣು ಗೀಜಗ ಈ ಗೂಡನ್ನು ನೋಡಿ ಗೂಡು ಕಟ್ಟಿದ ಗಂಡನ್ನು ಮೆಚ್ಚಿದೊಡೆ ಮಿಲನವಾಗಿ ಸಂಸಾರ ಶುರು. ಹೆಣ್ಣು ಹಕ್ಕಿ ಮೊಟ್ಟೆ ಇಟ್ಟೊಡನೆ ಗಂಡು ಗೀಜಗ ಇನ್ನೊಂದು ಹೆಣ್ಣನ್ನು ಸೆಳೆಯಲು ಬೇರೆ ಗೂಡಿನ ತಯಾರಿ ಶುರುಮಾಡಿಕೊಳ್ಳುತ್ತದೆ. ಸಾಮಾನ್ಯವಾಗಿ ಹಳದಿ ಬಣ್ಣದಿಂದ ಕೂಡಿದ ಈ ಹಕ್ಕಿಯ ತಲೆ ಎದೆ ಹೊಟ್ಟೆಯ ಭಾಗ ಹೊಳೆಯುವ ಹಳದಿ ಬಣ್ಣಕ್ಕಿರುತ್ತದೆ. ಗದ್ದೆಗಳಲ್ಲಿ ಉದುರಿದ ಕಾಳುಗಳನ್ನು ತಿನ್ನುತ್ತೆ. ಹಾರುವ ಗುಂಪು ಗುಂಪು ಗೀಜಗಗಳನ್ನು ಕಾಣಬಹುದು. ಚಿರಿ ಚಿರಿ ಚಿರಿ ಎಂದು ಕೂಗುತ್ತಾ ರಾತ್ರಿ ವೇಳೆ ಒಂದೇಮರದಲ್ಲಿ ಒಟ್ಟಾಗಿ ಕುಳಿತು ನಿದ್ದೆ ಮಾಡುತ್ತವೆ. ಕೊಕ್ಕು ಗುಬ್ಬಚ್ಚಿಗಿದ್ದಂತೆ ಬಲಿಷ್ಠವಾಗಿದೆ. ಇದು ದಕ್ಷಿಣ ಏಷ್ಯಾದ್ಯಂತ ಕಾಣಸಿಗುತ್ತವೆ.



**ಕೆಂಪು ರಾಟವಾಳ** **© ಪೃಥ್ವಿ.ಬಿ**

ಸೂರಕ್ಕಿ ಗಾತ್ರದ ಈ ಹಕ್ಕಿ ಬಯಲು ಪ್ರದೇಶದಲ್ಲಿ ಹುಲ್ಲುಗಾವಲಿನಲ್ಲಿ ನೀರಿರುವ ತಾಣಗಳಲ್ಲಿ ಕಂಡುಬರುತ್ತದೆ. ಕೆಂಡದಂತೆ ಹೊಳೆಯುವ ಬಣ್ಣವುಳ್ಳ ಪುಕ್ಕದಿಂದ ಕಂಗೊಳಿಸುವ ಗಂಡುಹಕ್ಕಿ ದೆಸೆಯಿಂದ ಇದನ್ನು ಹಿಡಿದು ಪಂಜರದೊಳಗಿಟ್ಟು ಸಾಕುತ್ತಾರೆ. ಏಷ್ಯಾದ ದಕ್ಷಿಣ ಭಾಗದಲ್ಲಿ ಕಾಣಸಿಗುತ್ತದೆ. ಕೆಂಪು ಕೊಕ್ಕುಳ್ಳ ಕೆಂಪು ಮುನಿಯನ ಬೂದ ಪುಕ್ಕ ದುಂಡಗೆ ಇದೆ. ಕೆಂಪುಹೊಟ್ಟೆಯ ಮೇಲೆ ಬಿಳಿ ಚುಕ್ಕೆಗಳಿವೆ. ಗುಂಪುಗಳಲ್ಲೇ ಕಾಣಸಿಗುವ ಈ ಮುನಿಯಾಗಳು ಜೋರಾಗಿ ರೆಕ್ಕೆ ಬಡಿಯುತ್ತಾ ಹಾರುತ್ತವೆ. ಹಾರುತ್ತಲೇ ಪಿಪ್ ಪಿಪ್ ಎಂದು ಒಮ್ಮೆ ಹಾಡುತ್ತವೆ. ಹುಲ್ಲಿನ ಬೀಜ ಮಣ್ಣು ಸಣ್ಣ ಸಣ್ಣ ಗೆದ್ದಲು ಕೀಟಗಳೇ ಇವುಗಳ ಆಹಾರ. ಹುಲ್ಲಿನಿಂದ ಬಟ್ಟಲಿನಾಕಾರಕ್ಕೆ ಕಟ್ಟಿದ ಚಿಕ್ಕ ಗೂಡಿನಲ್ಲಿ 2-3 ಮೊಟ್ಟೆಗಳನ್ನಿಟ್ಟು ಗಂಡು ಹೆಣ್ಣು ಎರಡು ಹಕ್ಕಿಗಳು ಮರಿಗಳನ್ನು ಸಾಕಿ ಬೆಳೆಸುತ್ತವೆ.



ಹೆಜ್ಜಾರ್ಲೆ © ಪೃಥ್ವಿ.ಬಿ

ಕೊಕ್ಕಿನ ಮೇಲೆ ಚುಕ್ಕಿಗಳುಳ್ಳ ಈ ದೊಡ್ಡ ಹಕ್ಕಿಯ ಬಣ್ಣ ಬೂದು. ಇದು ಸಾಮಾನ್ಯವಾಗಿ 8-10 ಕೆಜಿ ತೂಕವಿದ್ದು, ದೊಡ್ಡ ಕೊಕ್ಕಿದೆ. ದಕ್ಷಿಣ ಏಷ್ಯಾದೇಶದಲ್ಲಿ ಇವು ಮರಿಮಾಡುತ್ತವೆ, ಸಮುದ್ರ ತೀರಗಳಲ್ಲಿ ಇವನ್ನು ಕಾಣಬಹುದು. ಗುಂಪಾಗಿ ಹಾರುವ ಈ ಹಕ್ಕಿ ಗೂಡುಗಳನ್ನು ಸಹ ಗುಂಪಾಗಿ ಒಂದೇ ಜಾಗದಲ್ಲಿ ಕಟ್ಟುತ್ತದೆ. ಮಾನವನ ಅತಿಕ್ರಮಣದಿಂದ ವಾಸಸ್ಥಳಗಳು ಕ್ಷೀಣಿಸುತ್ತಿವೆ. ಇವುಗಳ ಸಂಖ್ಯೆಯು ಸಹ ಕಡಿಮೆಯಾಗುತ್ತಿದೆ. ನೀರಿನ ಮೇಲೆ ಈಜುವ ಈ ಹಕ್ಕಿ ತನ್ನ ದೊಡ್ಡ ಕೊಕ್ಕಿನಿಂದ ಮೀನುಗಳನ್ನು ಹಿಡಿದು ಗುಳುಂ ಮಾಡುತ್ತದೆ.

ಛಾಯಾಚಿತ್ರಗಳು : ಪೃಥ್ವಿ.ಬಿ, ಮೈಸೂರು
ಲೇಖನ : ಶಂಕರಪ್ಪ.ಕೆ.ಪಿ